Photo by D. S. Kasbekar



ಬಹುಮಾನ ಪಡೆದ ಶೀರ್ಷಿಕೆ

ಅಕ್ಕತಂಗಿಯರು ಅವರಾದರೆ

ಕಳಿಸಿದವರು : ಬಿ. ನಾಗೇಂದ್ರನಾಥ ಬಾಳಿಗ

# ಚಂದಮಾಮ

## ಈ ಸಂಚಿಕೆಯಲ್ಲಿ



ಇವುಗಳೆಲ್ಲಾ ತುಂಬಿವೆ.





1
2
3
4










LIFEBUOY
SOAP

ಯುವಜನ ವಾಚಕರಿಗೆ ಔತಣವೀಯುವ

# ಚಂದಮಾಮ

## ಈಗ ಆರು ಭಾಷೆಗಳಲ್ಲಿ ಪ್ರಕಟವಾಗುತ್ತಿದೆ

ಕನ್ನಡ, ತೆಲುಗು, ತಮಿಳು, ಹಿಂದಿ, ಮರಾಠಿ ಮತ್ತು ಗುಜರಾತಿ

★

ಪ್ರತಿ ತಿಂಗಳೂ **2,15,000** ಮನೆಗಳನ್ನು ಅಲಂಕರಿಸುತ್ತದೆ

★

ಪ್ರತಿಯೊಂದು ಕುಟುಂಬಕ್ಕೂ ನಿಮ್ಮ ವ್ಯಾಪಾರಸಮಾಚಾರವನ್ನು
ತಲುಪಿಸಲು ಮಹತ್ತರವಾದ ಸಾಧನ

ವಿವರಗಳಿಗೆ ಬರೆಯಿರಿ:

**ಚಂದಮಾಮ ಪಬ್ಲಿಕೇಷನ್ಸ್**

ವಡಪಳನಿ :: ಮದ್ರಾಸು-26.

---

## ಎಲ್ಲೆಲ್ಲಿಯೂ ನ್ಯೂಟ್ರೀನ್ ಎಂಬುದೇ ಮಾತು!

**Nutrine**

ಮಕ್ಕಳಿಗೆ ನ್ಯೂಟ್ರೀನ್ "ಡ್ರಮ್" ತುಂಬಾ ಇಷ್ಟ. ಏಕೆಂದರೆ ನ್ಯೂಟ್ರೀನ್ ಕಂಪೆನಿಯವರು ಮಿಠಾಯಿಗಳನ್ನು ಬಲು ಚೆಂದವಾಗಿ 'ಪ್ಯಾಕ್' ಮಾಡುವುದರಲ್ಲಿ ಒಂದು ಹೊಸ ಪದ್ಧತಿಯನ್ನು ಕೈಕೊಂಡಿದ್ದಾರೆ. ಬಹು ರುಚಿಯಾದ ನ್ಯೂಟ್ರೀನ್ ಮಿಠಾಯಿಗಳೂ, ಟಾಫೀಗಳೂ ಆಕರ್ಷಕವಾದೊಂದು ಪೆಟ್ಟಿಗೆಯಲ್ಲಿ ಡಲ್ಪಟ್ಟು ಬೆಲೆಯಲ್ಲಿ ಏನೂ ಹೆಚ್ಚಿಸದೆ, ವಾಡಿಕೆಯಾಗಿರುವ ಬೆಲೆಗೇ ಸಿಕ್ಕುತ್ತವೆ.






ನಿಮ್ಮ ಮಧುರವಾದ ಆನಂದಕ್ಕೆ:

**ದಿ ನ್ಯೂಟ್ರೀನ್ ಕನ್‌ಫೆಕ್ಷನರಿ ಕೋ., ಲಿ.**

ಚಿತ್ತೂರು (ಆಂಧ್ರಪ್ರದೇಶ)


ಒಂದು ಕ್ಷಣಕ್ಕೆ
ರೋಮಾಂಚಕವಾಗಿರುವ ಪುಸ್ತಕ
- ಆದರೆ ಟೀ
ಸದಾಕಾಲಕ್ಕೆ
ರೋಮಾಂಚಕ!
ನಾನು ಟೀ
ನಾನು
ಬರೆಯುವವರಿಗೆ ಮತ್ತು ಓದುವವರಿಗೆ ಮಿತ್ರ
TEA BOARD
INDIA
PST 200



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

---

**ಪ್ರ**ತೀಕಾರಕ್ಕೆ ಪ್ರತಿಯಾದುದು ಪ್ರತ್ಯುಪಕಾರ. ಪ್ರತ್ಯುಪಕಾರವು ಉತ್ತಮಗುಣದ ಕುರುಹು. ಪ್ರತೀಕಾರವು ಮಧ್ಯಮಗುಣದ ಚಿಹ್ನೆ. ಈ ವಿಷಯ ಎಲ್ಲರಿಗೂ ಗೊತ್ತಿದೆ. ಸಾಮಾನ್ಯವಾಗಿ ಎಲ್ಲರೂ ಪ್ರತ್ಯುಪಕಾರವನ್ನು ಬೇಗನೇ ಮರೆತುಬಿಡುತ್ತಾರೆ. ಪ್ರತೀಕಾರವನ್ನುಮಾತ್ರ ಮರೆಯದೆ, ಒಳಗೊಳಗೇ ಮಸೆಯುತ್ತಿರುತ್ತಾರೆ. ಇದರಿಂದಾಗುವ ದುಷ್ಟಪರಿಣಾಮಗಳನ್ನು ಪ್ರತಿನಿತ್ಯ ಕಾಣುತಿದ್ದರೂ, ಪ್ರತ್ಯುಪಕಾರದ ಕಡೆಗೆ ಜನತೆಯ ಒಲವು ಹೋಗುವುದಿಲ್ಲ. ಹೌದು, ಪ್ರತೀಕಾರವು ಹಗೆಯ ಮಗ. ಹಗೆಯೆಂಬುದು ಮಾನವರ ದೃಷ್ಟಿಯನ್ನು ಸಂಕುಚಿತಗೊಳಿಸುತ್ತದೆ. ಮಾನವನ ಸಂಸ್ಕಾರ, ಅಭಿವೃದ್ಧಿಗಳಿಗೆ ಹಗೆಯೊಂದು ಆತಂಕ. ಆದುದರಿಂದಲೇ ಪ್ರತೀಕಾರವಾಂಛೆ ಮಾನವರ ಹೃದಯದಲ್ಲಿ ಭುಗುಭುಗಿಲಾಗಿ ಕೆರಳುತ್ತಿರುತ್ತದೆ. ಹಗೆಯನ್ನೂ ಪ್ರತೀಕಾರವಾಂಛೆಯನ್ನೂ ವಿವೇಕದಿಂದಲೇ ವಿಸರ್ಜಿಸಿಕೊಳ್ಳುವ ಪ್ರಯತ್ನ ಪಡಬೇಕು. ಅದರ ಪ್ರಭಾವವನ್ನು ಹೇಗೆ ಕಡಮೆ ಮಾಡಿಕೊಳ್ಳಬಹುದೆಂಬುದನ್ನು ಬಿಡಿಸಿ ತೋರಿಸುತ್ತದೆ ಈ ಸಂಚಿಕೆಯಲ್ಲಿರುವ "ಪ್ರತೀಕಾರ" ವೆಂಬ ಬೇತಾಳ ಕಥೆ. ಇನ್ನು ಜೀವನದಲ್ಲಿ ಅಭ್ಯುದಯ ಸಾಧನೆಯಾಗಬೇಕಾದರೆ, ತನ್ನ ಭಾವನೆಯಲ್ಲಿಯೂ ಸಂಸ್ಕಾರ ಬರಬೇಕಾದುದು ಅಗತ್ಯ. ಇದಕ್ಕೆ 'ಅದೃಷ್ಟದ ಆಟ' ಕಥೆ ಒಳ್ಳೆಯ ಉದಾಹರಣೆ.

---

ಸಂಪುಟ ೨೧] ಸೆಪ್ಟೆಂಬರು ೧೯೫೮ [ಸಂಚಿಕೆ ೩



# ಮುಖಚಿತ್ರ

ಕೌರವ-ಪಾಂಡವರ ನಡುವೆ ಅನೇಕ ರಾಜರು ತಂತಮ್ಮ ಸೈನ್ಯಗಳೊಡನೆ ಬಂದು ಸೇರಿದರು. ಕೌರವರಕಡೆ ಹನ್ನೊಂದು ಅಕ್ಷೌಹಿಣಿಯೂ, ಪಾಂಡವರಕಡೆ ಏಳು ಅಕ್ಷೌಹಿಣಿಯೂ, ಸೇನೆಯ ಸಂಖ್ಯೆ ಸೇರಿತು.

ಈ ನಡುವೆ ಪಾಂಡವರು ಸಂಧಿ ರಾಯಬಾರಕ್ಕೆ ಕಳುಹಿಸಿದ ದ್ರುಪದನ ಪುರೋಹಿತನು, ಧೃತರಾಷ್ಟ್ರನ ಸಭೆಗೆ ಬಂದು ಪಾಂಡವರ ಕೋರಿಕೆ, ಅಭಿಪ್ರಾಯ ಗಳನ್ನು ತಿಳಿಸಿದನು. "ಈ ವಿಷಯವನ್ನು ಆಲೋಚನೆ ಮಾಡಿ ಸಂಜಯನ ಮೂಲಕ ಪಾಂಡವರಿಗೆ ಪ್ರತ್ಯುತ್ತರ ಕಳುಹಿಸುತ್ತೇವೆ" ಎಂದು ಹೇಳಿ ಧೃತ ರಾಷ್ಟ್ರನು ಆ ಪುರೋಹಿತನನ್ನು ವಾಪಾಸು ಕಳುಹಿಸಿದನು. ಅನಂತರ ಸಂಜಯನು ಬಂದು, ಯುದ್ಧವು ಒಳಿತಲ್ಲವೆಂದು ಪಾಂಡವರಿಗೆ ತಿಳಿಸಿದನು.

"ಒಳ್ಳೆಯದರಲ್ಲೇ ದುರ್ಯೋಧನನು ನಮ್ಮ ರಾಜ್ಯವನ್ನು ನಮಗೆ ಕೊಟ್ಟು ಬಿಟ್ಟರೆ ನಾವೇಕೆ ಯುದ್ಧಮಾಡುತ್ತೇವೆ? ಇದಕ್ಕೆ ತಪ್ಪಿದರೆ, ತಪ್ಪದೆ ಯುದ್ಧ ಮಾಡಿಯೇ ನಮ್ಮದನ್ನು ನಾವು ಪಡೆಯುತ್ತೇವೆ." ಎಂದ ಧರ್ಮರಾಯ. ಕೊಟ್ಟ ಕೊನೆಗೆ ಧರ್ಮರಾಯನು ಐದು ಊರುಗಳನ್ನುಮಾತ್ರ ಕೇಳಿದನು. ಅವುಗಳಲ್ಲಿಯೂ ಕುಶಸ್ಥಲ, ವೃಕಸ್ಥಲ, ಮಾಕಂದಿ, ವಾರಣಾವತ ಎಂಬ ನಾಲ್ಕೂರುಗಳನ್ನು ಮಾತ್ರವೇ ಕೇಳಿ ಐದನೆಯದನ್ನು ದುರ್ಯೋಧನನಿಗೇ ಬಿಟ್ಟನು.

ಸಂಜಯನು ಹಸ್ತಿನಾಪುರಕ್ಕೆ ಹಿಂದಿರುಗಿ ಧೃತರಾಷ್ಟ್ರನಿಗೆ ನಡೆದ ಸಂಗತಿ ಯನ್ನು ಹೇಳಿದನು. ಧೃತರಾಷ್ಟ್ರನಿಗೆ ರಾತ್ರಿ ನಿದ್ರೆಕೂಡ ಹಿಡಿಸಲಿಲ್ಲ. ವಿದುರನನ್ನು ಕರೆಸಿದನು. ವಿದುರನು ಅವನಿಗೆ ಅನೇಕ ನೀತಿಗಳನ್ನು ಬೋಧಿಸಿದನು.

ಮರುದಿನ ಸಂಜಯನು ಪಾಂಡವರ ಸಂದೇಶವನ್ನು ದುರ್ಯೋಧನನ ಸಭೆಯಮುಂದಿಟ್ಟನು. ಭೀಷ್ಮದ್ರೋಣರು ಯುದ್ಧದಿಂದಾಗುವ ಅಪಾಯವನ್ನು ತಿಳಿಸಿದರು. ಅರ್ಜುನನ ಬಲವನ್ನು ವಿವರಿಸಿದರು. ಕರ್ಣನು ತಾನೊಬ್ಬನೇ ಪಾಂಡವರ ಬಲವನ್ನು ನಾಶಮಾಡಬಲ್ಲೆನೆಂದು ಹೆಮ್ಮೆಯಾಡಿದನು. ಭೀಷ್ಮನು ಅವ ನನ್ನು ನಿಂದಿಸಿದನು. ಕರ್ಣನು ರೇಗಿ "ಈ ಭೀಷ್ಮ ಬದುಕಿರುವಾಗ ನಾನು ಆಯುಧ ಮುಟ್ಟಲಾರೆ" ಎಂದು ಪ್ರತಿಜ್ಞೆಮಾಡಿ ಸಭೆಯಿಂದೆದ್ದು ಹೋದನು. ದುರ್ಯೋ ಧನನೂ ಕೋಪದಿಂದ ಭೀಷ್ಮನನ್ನು ಕುರಿತು—"ನಾನು ನಿಮ್ಮಂಥವರನ್ನು ನಂಬಿ ಯುದ್ಧಕ್ಕಿಳಿಯುವುದಲ್ಲ. ನಾನೂ, ಕರ್ಣ ದುಶ್ಶಾಸನರೂ ಸೇರಿ ಪಾಂಡವರನ್ನು ಕೊಲ್ಲಬಲ್ಲೆವು!" ಎಂದನು ಹಠದಿಂದ.




ಒಂದಾನೊಂದು ದೇಶದಲ್ಲಿ ಒಬ್ಬ ರಾಜನಿದ್ದನು. ಆತನಿಗೆ ಒಬ್ಬಳೇ ಮಗಳಿದ್ದಳು. ಆ ಹುಡುಗಿ ಅಪೂರ್ವ ಸುಂದರಿ. ಆದುದರಿಂದ ಅನೇಕ ಯುವಕರು ಆಕೆಯನ್ನು ವಿವಾಹವಾಗಲು ಹಾತೊರೆಯುತ್ತಿದ್ದರು.

ತನ್ನ ಮಗಳಿಗೆ ಅನುರೂಪನಾದ ವರನನ್ನು ನಿಶ್ಚಯಿಸಲು ಆತನು ಒಂದು ಉಪಾಯ ಹೂಡಿದನು. "ನನ್ನನ್ನು ಮೋಸಗೊಳಿಸಿದವರಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುವೆನು. ಅರ್ಧ ರಾಜ್ಯವನ್ನೂ ಕೊಡುತ್ತೇನೆ" ಎಂದು ರಾಜ್ಯದಲ್ಲೆಲ್ಲಾ ಡಂಗುರ ಹೊಯಿಸಿದನು. ರಾಜನನ್ನು ಮೋಸಗೊಳಿಸಲು ಪ್ರಯತ್ನಿಸಿ ವಿಫಲರಾದವರಿಗೆ ಛಡಿ ಏಟಿನ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು.

ರಾಜನು ಮೊದಲೇ ತುಂಬಾ ಚತುರನು. ಆದರೂ ರಾಜಕುಮಾರಿಯನ್ನು ಮದುವೆಯಾಗುವ ಆಶೆಯಿಂದ ಅನೇಕ ಜನ ಯುವಕರು ಬಂದು, ರಾಜನನ್ನು ವಂಚಿಸಲಾಗದೆ ಛಡಿ ಏಟು ತಿಂದು ಹೋಗುತ್ತಿದ್ದರು.

ಆ ನಗರದಲ್ಲೇ ಒಬ್ಬ ಧನಿಕನಿದ್ದನು. ಅವನಿಗೆ ಮೂವರು ಗಂಡು ಮಕ್ಕಳು. ಅವರಲ್ಲಿ ಹಿರಿಯರಿಬ್ಬರೂ ಬುದ್ಧಿವಂತರು. ಕೊನೆಯವನು ಶುದ್ಧ ತಿಳಿಗೇಡಿಯಂತೆ ಕಾಣುತ್ತಿದ್ದನು. ಅವನು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಸದಾ ಉಗುರು ಕಡಿಯುತ್ತಾ ಒಂದೆಡೆ ಕುಳಿತಿರುತ್ತಿದ್ದನು. ಎಲ್ಲರೂ ಅವನನ್ನು ಬುದ್ದನೆಂದು ಹಾಸ್ಯಮಾಡುತ್ತಿದ್ದರು.

ಧನಿಕನ ಹಿರಿಯ ಮಗ ಒಂದು ದಿನ ತಂದೆಯೊಂದಿಗೆ "ಅಪ್ಪಾ, ರಾಜಕುಮಾರಿಯನ್ನು ವಿವಾಹವಾಗಲು ಎಲ್ಲರೂ ಪ್ರಯತ್ನಿಸುತ್ತಿದ್ದಾರೆ. ನಾನೂ ಒಮ್ಮೆ ಪ್ರಯತ್ನಿಸುತ್ತೇನೆ" ಎಂದನು.

"ಹೋಗು, ಹೋಗು. ಇದುವರೆಗೆ ಪ್ರಯತ್ನಮಾಡಿದವರೆಲ್ಲ ನಿನಗಿಂತ ಮಹಾ ಬುದ್ಧಿವಂತರೇ?" ಎಂದು ಮಗನಿಗೆ ಪ್ರೋತ್ಸಾಹಕೊಟ್ಟನು. ಆ ತರುಣನು ನೆಟ್ಟಗೆ ಅರಮನೆಗೆ ಹೋಗಿ, ತಾನು ಬಂದ ಕಾರ್ಯವನ್ನು ತಿಳಿಸಿ, ರಾಜನ ಭೇಟಿಗಾಗಿ ಅನುಮತಿ

ಎಂ. ಸುಬ್ಬಣ್ಣ



ಕೇಳಿದನು. ಅವನನ್ನು ಭಟರು ರಾಜನಿದ್ದ ಸ್ಥಳಕ್ಕೆ ಕರೆದುಕೊಂಡು ಹೋದರು. ಅವನು ತಕ್ಷಣ ರಾಜನಿಗೆ ವಿನಯದಿಂದ ನಮಸ್ಕಾರ ಮಾಡಿ, ಕಿಟಕಿಯಿಂದ ಹೊರಗೆ ಇಣಿಕಿ ನೋಡಿ "ಆಹಾ, ಅಲ್ಲಿ ಕಾಣುತ್ತಿರುವ ಮೂರು ಕರಿಯ ಬಾತುಗಳು ಎಷ್ಟೊಂದು ಸುಂದರ ವಾಗಿವೆ" ಎಂದನು. "ನಿನ್ನ ಬುದ್ಧಿಮತಿಗೆ ಬೆಂಕಿಹಾಕ. ನೋಡಲು ಒಂದು ಕರಿಯ ಬಾತು ಸಾಲದೆ? ಇವನನ್ನು ಎಳೆದುಕೊಂಡು ಹೋಗಿ ಛಡಿ ಏಟು ಕೊಟ್ಟು ಕಳುಹಿಸಿ" ಎಂದು ರಾಜನು ಭಟರಿಗೆ ಆಜ್ಞಾಪಿಸಿದನು.

ಹಿರಿಯವನು ಏಟು ತಿಂದು ಮನೆಗೆ ಬಂದನು. ಎರಡನೇಯವನಿಗೆ ತನ್ನ ಅದೃಷ್ಟ ಪರೀಕ್ಷಿಸಬೇಕೆನಿಸಿತು.

ಅವನೂ ಸಹ ತಂದೆಯ ಅನುಮತಿ ಪಡೆದು ರಾಜನ ದರ್ಶನಕ್ಕೆ ಹೊರಟನು. ಭಟರು ಅವನನ್ನು ರಾಜನಿದ್ದ ಕೋಣೆಗೆ ಕರೆದುಕೊಂಡು ಹೋದರು. ಅವನು ರಾಜನಿಗೆ ಕೈಮುಗಿದು, ಕಿಟಕಿಯಲ್ಲಿ ಹೊರಗೆ ಇಣಿಕಿ ನೋಡಿ "ಎಲಾ, ಇದೇನಿದು! ಆ ಮರದ ಮೇಲಿರುವ ಕಾಗೆಯ ಬೆನ್ನಿನಮೇಲೆ ಮೂರು ಬಿಳಿಪಟ್ಟೆಗಳಿವೆ" ಎಂದನು.

"ಕಾಗೆಯ ಬೆನ್ನಿನಮೇಲೆ ಪಟ್ಟೆಗಳಿರು ವುದು ಸಟೆಯಾದರೂ, ನಿನ್ನ ಬೆನ್ನಿನಮೇಲೆ ಏಟು ಬೀಳುವುದಂತೂ ದಿಟ. ಯಾರಲ್ಲಿ? ಇವನಿಗೆ ಛಡಿ ಏಟು ಕೊಟ್ಟು ಕಳುಹಿಸಿ" ಎಂದು ರಾಜನು ಭಟರಿಗೆ ಆಜ್ಞಾಪಿಸಿದನು.

ಎರಡನೇಯವನು ಪರಾಭವ ಹೊಂದಿದ ನಂತರ ಬುದ್ಧನು ತಂದೆಯ ಬಳಿಗೆ ಹೋಗಿ ತಾನು ರಾಜನನ್ನು ಮೋಸಗೊಳಿಸಿ ರಾಜ ಕುಮಾರಿಯನ್ನು ಮದುವೆಯಾಗುವುದಾಗಿ ಹೇಳಿದನು. "ಮೇಧಾವಿಗಳೆನಿಸಿಕೊಂಡ ನಿನ್ನ ಅಣ್ಣಂದಿರಿಂದಾಗದ ಕಾರ್ಯ ನಿನ್ನಿಂದ ಸಾಧ್ಯವೇ? ನೀನು ಮೊದಲೇ ಒಂದು ವಿಗ್ರಹ!" ಎಂದು ಹೀಯ್ಯಾಳಿಸಿದನು ತಂದೆ.

ಆದರೆ ಬುದ್ಧನು ಹೋಗಲೇಬೇಕೆಂದು ಹಠಹಿಡಿದನು. "ಸರಿ, ನಿನಗೆ ಅಷ್ಟು ಹಂಬಲ ವಿದ್ದರೆ ಹೋಗಿ ಏಟು ತಿಂದುಕೊಂಡು ಬಾ" ಎಂದ ತಂದೆ.

ಕಿರಿಯವನು ಗೋಡೆಗೆ ನೇತುಹಾಕಿದ ಕೊಳಕಾದ ಕುಲಾವಿಯನ್ನು ತೆಗೆದು, ಒದರಿ,



ಕೈಯಲ್ಲಿ ಹಿಡಿದು ಅರಮನೆಗೆ ಹೊರಟನು. ದಾರಿಯಲ್ಲಿ ಒಬ್ಬಾಕೆ ಮಡಕೆಗಳನ್ನು ಒಂದರ ಮೇಲೊಂದಿಟ್ಟುಕೊಂಡು ಹೋಗುತ್ತಿರುವುದನ್ನು ಅವನು ಕಂಡನು.

"ಏನಮ್ಮಾ, ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವೆ ಈ ಮಡಿಕೆಗಳನ್ನು" ಎಂದು ಕೇಳಿದನು. "ಮಾರಲು ಪೇಟೆಗೆ ಹೋಗುತ್ತಿದ್ದೇನೆ ಸ್ವಾಮಿ" ಎಂದಳಾಕೆ. ಬುದ್ಧನು ಅದರ ಬೆಲೆ ಎಷ್ಟೆಂದು ಕೇಳಿದನು. ಆಕೆ ಮೂರು ರೂಪಾಯಿಯೆಂದು ಹೇಳಿದಳು.

"ನೋಡಮ್ಮಾ, ಐದು ರೂಪಾಯಿ ಕೊಡುತ್ತೇನೆ. ನಾನು ಹೇಳಿದಂತೆ ಮಾಡುವೆಯಾ?" ಎಂದ ಬುದ್ಧ. ಆಕೆ ಒಪ್ಪಿಕೊಂಡಳು. ಇಬ್ಬರೂ ಒಟ್ಟಿಗೆ ಅರಮನೆಯವರೆಗೆ ಹೋದರು. ಮುಂದೇನು ಮಾಡಬೇಕೋ ಆಕೆಗೆ ಬುದ್ಧನು ವಿವರಿಸಿ ಹೇಳಿದನು.

ಇಬ್ಬರೂ ಅರಮನೆಯ ಮುಂದೆ ಬಂದು ನಿಂತರು. ಬುದ್ಧನು ಗಟ್ಟಿಯಾಗಿ "ನಾನು ಮಾರುವುದಿಲ್ಲ. ಖಂಡಿತ ಮಾರುವುದಿಲ್ಲ. ನನಗೇ ಅದು ಬೇಕು. ವೃಥಾ ನನ್ನನ್ನು ಪೀಡಿಸಬೇಡ" ಎಂದು ಕಿರಿಚಲಾರಂಭಿಸಿದನು. ಈ ಕೂಗಾಟ ಕೇಳಿ ರಾಜನು ಹೊರಗೆ ಬಂದು ಬುದ್ಧನನ್ನು ಕುರಿತು "ಏಯ್, ಹೀಗೇಕೆ ಗೊಂದಲಮಾಡುತ್ತಿರುವೆ? ಮಾರಲು ನಿನ್ನ ಬಳಿ ಇರುವುದಾದರೂ ಏನು?" ಎಂದು ಕೇಳಿದ. "ಇದೋ ನೋಡಿ ಈ ಕುಲಾವಿ. ಇದೊಂದು ಮಾಯಾಕುಲಾವಿ ಇದನ್ನು ತಲೆಯ ಮೇಲಿಟ್ಟುಕೊಂಡರೆ ಯಾರನ್ನು ಬೇಕಾದರೂ ಮೋಸಗೊಳಿಸಬಹುದು" ಎಂದ ಬುದ್ಧ.

"ಎಲ್ಲಿ, ಯಾರನ್ನಾದರೂ ಮೋಸಗೊಳಿಸು ನೋಡೋಣ" ಎಂದ ರಾಜ.

ಬುದ್ಧನು ಕುಲಾವಿಯನ್ನು ತಲೆಗೆ ಹಾಕಿಕೊಂಡು ಅತ್ತಿತ್ತ ನೋಡಿ, ಮಡಕೆ ಮಾರುವವಳನ್ನು ಕುರಿತು "ಏನಮ್ಮಾ, ನಿನ್ನ ಮಡಕೆಗಳನ್ನೆಲ್ಲಾ ಚೂರುಚೂರು ಮಾಡು" ಎಂದನು. ಕೂಡಲೇ ಅವಳು ಒಂದೊಂದಾಗಿ ಎಲ್ಲ ಮಡಕೆಗಳನ್ನು ತೆಗೆದು ಚೂರುಚೂರು ಮಾಡಿಹಾಕಿದಳು.

ರಾಜನು ಬೆರಗಾದನು. ಅಂತಹ ಕುಲಾವಿ ಇತರರ ಹತ್ತಿರ ಇದ್ದರೆ ತನಗೆ ಮತ್ತು ತನ್ನ

ಮಗಳಿಗೆ ಕ್ಷೇಮಕರವಲ್ಲವೆಂದು ಗ್ರಹಿಸಿ, ಅದನ್ನು ಹೇಗಾದರೂ ಪಡೆಯಲು ನಿಶ್ಚಯಿಸಿದನು. ಬುದ್ಧನು ಆ ಕುಲಾವಿಯನ್ನು ಮಾರುವುದಿಲ್ಲವೆಂದು ಹೇಳಿದನು. ಆಗ ರಾಜನು ಒಂದು ಥೈಲಿ ತುಂಬಾ ಮೊಹರಿಗಳನ್ನು ಕೊಡುವುದಾಗಿ ಆಶೆ ತೋರಿಸಿದನು. ಆಗ ಅವನು ತಲೆ ಕೆರೆದುಕೊಳ್ಳುತ್ತಾ "ಸರಿ, ಕೊಡಿ. ಯಾರಿಗೋ ಒಬ್ಬರಿಗೆ ಇದನ್ನು ಎಂದಿಗಾದರೂ ಮಾರಲೇಬೇಕಷ್ಟೆ" ಎಂದನು. ಅವನು ರಾಜನಿಗೆ ಕುಲಾವಿಯನ್ನು ಕೊಟ್ಟು ಮೊಹರಿ ತುಂಬಿದ ಚೀಲವನ್ನು ತೆಗೆದುಕೊಂಡು ಮನೆಗೆ ಹೋದನು.

ಅವನು ಪೇಟೆಗೆ ಹೋಗಿ ಬೆಲೆಬಾಳುವ ಉಡುಪನ್ನು ಕೊಂಡುಕೊಂಡನು. ಮಾರನೇಯ ದಿನ ಅದನ್ನು ತೊಟ್ಟುಕೊಂಡು ರಾಜನ ಬಳಿಗೆ ಹೋಗಿ "ಮಹಾಪ್ರಭೂ, ತಮ್ಮ ಮಗಳನ್ನು ನನಗೆ ಕೊಟ್ಟು ಮದುವೆ ಮಾಡಬೇಕು" ಎಂದನು.

ರಾಜನಿಗೆ ಏನು ಹೇಳಬೇಕೋ ತೋರಲಿಲ್ಲ. ಆ ಕುಲಾವಿಯಲ್ಲಿ ಯಾವುದೇ ಮಹಿಮೆಯಿಲ್ಲವೆಂದೂ, ತನಗೆ ಅವನು ಮೋಸಮಾಡಿರುವನೆಂದೂ ಆತನು ಆಗಲೇ ಗ್ರಹಿಸಿದ್ದನು. "ನೀನು ನನಗೆ ಮುನ್ನೆಚ್ಚರಿಕೆಯನ್ನು ಕೊಟ್ಟು ಮೋಸಗೊಳಿಸಲಿಲ್ಲ. ನಾಳೆ ಬೆಳಗ್ಗೆ ಮಂತ್ರಿಯನ್ನು ನನ್ನ ಬಳಿಗೆ ಕರೆ ತಂದರೆ ನೀನು ಬುದ್ಧಿವಂತನೆಂದು ಒಪ್ಪಿಕೊಳ್ಳುತ್ತೇನೆ" ಎಂದ ರಾಜ. ಸರಿಯೆಂದ ಬುದ್ಧ. ಮಾರನೇಯ ದಿನ ಮಂತ್ರಿ ಎಲ್ಲಿಗೂ



ಹೋಗದೆ ರಾಜನ ಅಪ್ಪಣೆಯಂತೆ ಮನೆಯಲ್ಲೇ ನಿಂತುಬಿಟ್ಟನು. ಮನೆಯ ಸುತ್ತಲೂ ಕಾವಲಿರಿಸಿ, ಬುದ್ಧನು ಅಲ್ಲಿಗೆ ಬಂದರೆ ನಾಲ್ಕು ಏಟುಕೊಟ್ಟು ಕಳುಹಿಸುವಂತೆ ಮಂತ್ರಿ ತನ್ನ ಭಟರಿಗೆ ಆಜ್ಞಾಪಿಸಿದನು.

ಬುದ್ಧನು ಮಾರುವೇಷದಲ್ಲಿ ಒಂದು ಗೋಣಿಚೀಲದಲ್ಲಿ ಸೇರಿಕೊಂಡು ಮಂತ್ರಿಯ ಮನೆಯ ಬಳಿಗೆ ಉರುಳಿಕೊಂಡು ಬಂದನು. ಭಟರು ಉರುಳಿಕೊಂಡು ಬರುತ್ತಿದ್ದ ಚೀಲವನ್ನು ನೋಡಿ ಚಕಿತರಾಗಿ, ಅದರ ಬಳಿಗೆ ಬಂದು "ಏಯ್, ಈ ಚೀಲದಲ್ಲಿ ಯಾರಿದ್ದಾರೆ?" ಎಂದು ಗದರಿಸಿ ಕೇಳಿದರು. "ಹುಷ್, ಮಾತನಾಡಬೇಡಿ" ಎಂದ ಒಳಗೆ ಹುದುಗಿದ್ದ ಬುದ್ಧ.

ಭಟರು ಈ ವಿಷಯವನ್ನು ಮಂತ್ರಿಗೆ ತಿಳಿಸಿದರು. ಆತನು ಹೊರಗೆ ಬಂದು ಚೀಲವನ್ನು ಕುರಿತು "ಯಾರು ನೀನು?" ಎಂದು ಕೇಳಿದನು. "ಮಾತನಾಡಬೇಡಿ. ಇದು ಜ್ಞಾನ ಭಂಡಾರದ ಚೀಲ. ನನಗೆ ಅನೇಕ ರಹಸ್ಯ ವಿಷಯಗಳನ್ನು ತಿಳಿಸುತ್ತಿದೆ" ಎಂದ ಬುದ್ಧ.

"ಎಲ್ಲಿ, ಅದು ಹೇಳುವ ವಿಷಯಗಳಲ್ಲಿ ಒಂದನ್ನು ಹೇಳು ನೋಡೋಣ" ಎಂದ ಮಂತ್ರಿ. "ನಿನ್ನೆ ಮಹಾರಾಜರನ್ನು ವಂಚಿಸಿದ ದುರಾತ್ಮ ಹದಿನೆಂಟು ಜನ ಯೋಧರೊಂದಿಗೆ ನಿಮ್ಮ ಮನೆಯ ಮೇಲೆ ಬೀಳುವನಂತೆ" ಎಂದ ಬುದ್ಧ. "ಈಗ ನಾನೇನು ಮಾಡಬೇಕು" ಕೇಳಿದ ಮಂತ್ರಿ. "ಚೀಲವನ್ನೇ ಕೇಳಿ" ಎಂದ ಬುದ್ಧ.



ಮಂತ್ರಿ ಚೀಲವನ್ನು ಬಿಚ್ಚಿದ. ವೇಷ ಮರೆಸಿಕೊಂಡಿದ್ದ ಬುದ್ಧನು ಹೊರಗೆ ಬಂದ. ಮಂತ್ರಿ ಚೀಲದಲ್ಲಿ ಕುಳಿತುಕೊಂಡು "ನಾನು ಏನು ಮಾಡಬೇಕು?" ಎಂದು ಚೀಲವನ್ನು ಕೇಳಿದನು. ಇಷ್ಟರಲ್ಲಿ ಬುದ್ಧನು ಚೀಲದ ಬಾಯನ್ನು ಹಗ್ಗದಿಂದ ಬಿಗಿದು ಕಟ್ಟಿ, ಅದನ್ನು ಹೊತ್ತುಕೊಂಡು ಬಂದು ರಾಜನ ಮುಂದೆ ಮೆಲ್ಲನೆ ಇಟ್ಟನು.

"ಭೇಷ್, ಈ ಪರೀಕ್ಷೆಯಲ್ಲೂ ಗೆದ್ದೆ. ನಾಳೆ ಬಂದು ನನ್ನ ಅಂತಃಪುರದಲ್ಲಿರುವ ನನ್ನ ಮಗಳನ್ನು ಗುರುತು ಹಿಡಿದು ಮದುವೆಯಾಗು. ನನ್ನ ಮಗಳ ಸಂಗಡ ಇನ್ನೂ ಎಂಬತ್ತು ಜನ ದಾಸಿಯರು ಇರುತ್ತಾರೆ. ಅವರಲ್ಲಿ ನನ್ನ ಮಗಳನ್ನು ಗುರುತು ಹಿಡಿಯಬೇಕು. ಗುರುತು ಹಿಡಿಯದಿದ್ದರೆ ನಿನಗೆ ಛಡಿಯೇಟುಗಳು ತಪ್ಪುವುದಿಲ್ಲ" ಎಂದನು.

ಮಾರನೇಯದಿನ ಬುದ್ಧನು ಸಣ್ಣ ಚೀಲವೊಂದರಲ್ಲಿ ಒಂದು ಇಲಿಯನ್ನು ಹಾಕಿಕೊಂಡು ಅಂತಃಪುರಕ್ಕೆ ಹೊರಟನು. ಅಲ್ಲಿ ಎಂಬತ್ತು ಜನ ಸುಂದರ ತರುಣಿಯರು ಒಂದೇ ರೀತಿ ಸಿಂಗಾರಿಸಿಕೊಂಡು, ಒಂದೇ ರೀತಿಯ ಆಭರಣಗಳನ್ನು ಧರಿಸಿಕೊಂಡು ಕುಳಿತಿದ್ದರು.

"ಇವರಲ್ಲಿ ನನ್ನ ಮಗಳನ್ನು ಪತ್ತೆಹಚ್ಚು" ಎಂದು ರಾಜನು ಬುದ್ಧನಿಗೆ ಹೇಳಿದನು.

ಬುದ್ಧನು ತನ್ನ ಕೈಯಲ್ಲಿದ್ದ ಚೀಲವನ್ನು ಬಿಚ್ಚಿ ಇಲಿಯನ್ನು ಆ ಸುಂದರ ತರುಣಿಯರ ನಡುವೆ ಎಸೆದನು. ಆ ಕನ್ಯೆಯರು ಕಿಟಾರನೆ ಕಿರುಚುತ್ತಾ ಚಲ್ಲಾಪಿಲ್ಲಿಯಾಗಿ ಓಡಿದರು. ಆದರೆ ಅವರಲ್ಲಿ ಒಬ್ಬಳುಮಾತ್ರ ಮೂರ್ಛಿತಳಾದಳು. ಕೂಡಲೇ ಉಳಿದವರೆಲ್ಲ ಇಲಿಯ ವಿಷಯವನ್ನು ಮರೆತು ಮೂರ್ಛಿತಳಾಗಿದ್ದವಳ ಬಳಿಗೆ ಬಂದು ಉಪಚರಿಸಲಾರಂಭಿಸಿದರು. ಬುದ್ಧನು ಅವಳನ್ನು ರಾಜನಿಗೆ ತೋರಿಸಿ "ಈಕೆಯೇ ನಿಮ್ಮ ಮಗಳು" ಎಂದನು.

ರಾಜನು ವಿಧಿಯಿಲ್ಲದೆ ಸುಮುಹೂರ್ತದಲ್ಲಿ ತನ್ನ ಮಗಳನ್ನು ಬುದ್ಧನಿಗೆ ಕೊಟ್ಟು ವಿವಾಹ ಮಾಡಿದನು. ಬುದ್ಧನು ಎಲ್ಲರಿಗಿಂತಲೂ ಬುದ್ಧಿವಂತನೆನಿಸಿಕೊಂಡು ರಾಜಕುಮಾರಿಯೊಂದಿಗೆ ತಾನೂ ರಾಜನಾಗಿ ಸುಖವಾಗಿ ವಾಸಮಾಡ ತೊಡಗಿದನು.



# ಕಂಚಿನ ಕೋಟೆ

## 2

[ ಮಾಹಿಷ್ಮತಿನಗರದ ಅರಸನಾದ ಯಶೋವರ್ಧನನು ತನ್ನ ಕುಮಾರರಿಬ್ಬರಲ್ಲಿ ಕಿರಿಯವನಾದ ಗುಣವರ್ಧನನಿಗೆ ಪಟ್ಟಾಭಿಷೇಕ ಮಾಡಬೇಕೆಂದು ನಿರ್ಧರಿಸಿದನು. ಆದರೆ ಇದಕ್ಕೆ ವೀರಪುರದ ಸಾಮಂತನಾದ ಸೂರ್ಯವರ್ಮನು ವ್ಯತಿರೇಕ ತೋರಿಸಿದನು. ಸರ್ಪಕೇತನೆಂಬ ಮತ್ತೊಬ್ಬ ಸಾಮಂತನು ಗುಣವರ್ಧನನೊಂದಿಗೆ ಪಿತೂರಿಹೂಡಿ, ಆತನನ್ನು ಕೊಲೆ ಮಾಡಲು ಹೊಂಚುಕಾದಿದ್ದು ಹಠಾತ್ತನೆ ಮೇಲೆಬಿದ್ದನು. ತರುವಾಯ—]

**ಸೂ**ರ್ಯವರ್ಮನು ತಾನು ಶತ್ರುವ್ಯೂಹದಲ್ಲಿ ಸಿಲುಕಿದೆನೆಂದು ಗ್ರಹಿಸಿದನು. ಆ ಶತ್ರು ಯಾರೆಂಬುದೂ ಅವನಿಗೆ ತಿಳಿಯಿತು. "ಕೊಲ್ಲಿ, ಸಾಯಿಸಿ, ಸೂರ್ಯವರ್ಮನು ಪ್ರಾಣದಿಂದ ಹೊರಬಿದ್ದರೆ ನಿಮ್ಮ ಪ್ರಾಣಗಳು ಉಳಿಯಲಿಕ್ಕಿಲ್ಲ" ಎಂಬ ಮಾತುಗಳು ಅವನಿಗೆ ಕೇಳಿಸಿದುವು. ಆ ಕರ್ಕಶವಾದಕಂಠ ಧ್ವನಿ ಸರ್ಪಕೇತನದೆಂದು ಅವನು ಕೂಡಲೇ ಗ್ರಹಿಸಿದನು. ಸೂರ್ಯವರ್ಮನು ತನ್ನ ಖಡ್ಗವನ್ನು ಗಾಳಿಯಲ್ಲಿ ರೊಯ್ಯನೆ ಬೀಸಲಾರಂಭಿಸಿದನು. ಅವನ ಎದುರಿಗೆ ಬಂದ ಭಟನ ತಲೆಯಷ್ಟೇ ಅಲ್ಲ. ಒಂದು ಪಕ್ಕದಿಂದ ಹಾದುಬಂದ ಮತ್ತೊಬ್ಬ ಭಟನ ಬಲಗೈ ಸಹ ಒಂದೇ ಏಟಿಗೆ ತುಂಡರಿಸಿಬಿತ್ತು. ಆದರೆ ಅದೇ ಸಮಯಕ್ಕೆ ಮತ್ತೆ ನಾಲ್ಕಾರು ಶತ್ರುಸೈನಿಕರು ಅವನನ್ನು ಸುತ್ತುಗಟ್ಟಿದರು. ಸರ್ಪಕೇತನು ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದನು. ತನ್ನ ಸಾವು ಶತಸಿದ್ಧವೆಂದು ಸೂರ್ಯ



ವರ್ಮನು ಮನಗಂಡನು. ಈ ಸಂಧಿಗ್ಧ ಸಮಯದಲ್ಲಿ ಹಠಾತ್ತನೆ ಅವನಿಗೆ ಚಂದ್ರವರ್ಮನು ಜ್ಞಾಪಕಕ್ಕೆ ಬಂದನು. ತನ್ನ ಮರಣಾನಂತರ ಸರ್ಪಕೇತನು ತನ್ನ ಸಂಸ್ಥಾನವನ್ನು ಆಕ್ರಮಿಸಲು ಯತ್ನಿಸುವನು. ಮುಂಜಾಗ್ರತೆ ತೆಗೆದುಕೊಳ್ಳಬೇಕೆಂದು ತನ್ನ ಮಗನಿಗೆ ಎಚ್ಚರಿಕೆ ಕೊಟ್ಟರೆ ಉತ್ತಮವೆನಿಸಿತು.

"ಸುಬಾಹು, ಸುಬಾಹು" ಎಂದು ಗಟ್ಟಿಯಾಗಿ ಕೂಗುತ್ತಾ ಸೂರ್ಯವರ್ಮನು ಶತ್ರುಪಕ್ಷದವನೊಬ್ಬನನ್ನು ಕಡಿದು ಚೆಲ್ಲಿ, ಮತ್ತೊಬ್ಬನ ಕುದುರೆಯನ್ನು ತಿವಿದು, ತನ್ನ ಕುದುರೆಯನ್ನು ಹಿಂದಕ್ಕೆ ಓಡಿಸಿದನು. ಅಷ್ಟರಲ್ಲಿ "ಸ್ವಾಮಿ," ಎಂದು ಸುಬಾಹುವಿನ ಉತ್ತರಬಂದಿತು. "ನೀನು ಕೂಡಲೇ ವೀರಪುರಕ್ಕೆ ಹೋಗಿ ಚಂದ್ರವರ್ಮನೊಂದಿಗೆ...." ಸೂರ್ಯವರ್ಮನು ಮಾತು ಮುಗಿಸುವ ಮೊದಲೇ ಒಬ್ಬ ಶತ್ರುಸೈನಿಕನು ಹಿಂದಿನಿಂದ ಅವನನ್ನು ತಿವಿದನು.

ಸೂರ್ಯವರ್ಮನು "ಅಯ್ಯೋ" ಎಂದು ಕುದುರೆಯ ಮೇಲಿಂದ ಕೆಳಗೆಬಿದ್ದುಬಿಟ್ಟನು. ಆಗ ಮತ್ತೆ ಕೆಲವರು ಬಂದು ನಿಸ್ಸಹಾಯಕನಾಗಿ ಬಿದ್ದಿದ್ದ ಸೂರ್ಯವರ್ಮನನ್ನು ಖಡ್ಗದಿಂದ ಮರಳಿ ತಿವಿದರು.

"ಅದೋ ಒಬ್ಬನು ಓಡಿಹೋಗುತ್ತಿದ್ದಾನೆ. ಅವನನ್ನು ಹಿಂಬಾಲಿಸಿ ಹಿಡಿದು ಕೊಂದುಹಾಕಿ. ಈ ಸುದ್ದಿ ವೀರಪುರದಲ್ಲಿ ಯಾರಿಗೂ ತಿಳಿಯಬಾರದು. ಹುಷಾರ್" ಎಂದು ಸರ್ಪಕೇತನು ಕಂಠಬಿರಿಯುವಂತೆ ಕಿರಿಚಿದನು. ಕೂಡಲೇ ನಾಲ್ವರು ಸವಾರರು ಓಡಿಹೋಗುತ್ತಿರುವ ಸುಬಾಹುವನ್ನು ಅಟ್ಟಿಸಿಕೊಂಡು ಹೋದರು.

ಸುಬಾಹು ಸೂರ್ಯವರ್ಮನ ಸೇವಕರಲ್ಲಿ ತುಂಬಾ ನಂಬಿಗಸ್ಥನು. ಅವನು ಬಾಲ್ಯದಿಂದಲೂ ಸೂರ್ಯವರ್ಮನ ಪೋಷಣೆಯಲ್ಲಿಯೇ ಬೆಳೆದವನು. ಸುಬಾಹು ಒಳ್ಳೆಯ ಬುದ್ಧಿವಂತನೂ, ಅತ್ಯಂತ ಶೂರನೂ ಧೀರನೂ ಆಗಿದ್ದನು.

ತನ್ನ ಪ್ರಭುವನ್ನು ರಕ್ಷಿಸುವುದು ಅಸಾಧ್ಯವೆಂದು ಗ್ರಹಿಸಿದ ಸುಬಾಹು ದಾರಿಯ ಮಧ್ಯದಲ್ಲಿ ನಡೆದ ಈ ಘೋರಕೃತ್ಯವನ್ನು





ಚಂದ್ರವರ್ಮನಿಗೆ ತಿಳಿಸಬೇಕೆಂದು ಗ್ರಹಿಸಿ ಕೊಂಡು, ತಕ್ಷಣ ತನ್ನ ಕುದುರೆಯನ್ನು ವೀರ ಪುರದ ಕಡೆಗೆ ಓಡಿಸಿದನು.

ಅಷ್ಟರಲ್ಲಿ ಅವನಿಗೆ ಸರ್ಪಕೇತನು ತನ್ನ ಭಟರಿಗೆ ಕೊಡುತ್ತಿದ್ದ ಎಚ್ಚರಿಕೆ ಕೇಳಿಸಿತು. ಆ ಕೂಡಲೇ ಆತನು ಶತ್ರುಸೈನದ ನಡುವೆ ಯಿಂದ ತನ್ನ ಕುದುರೆಯನ್ನು ಒಂದುಪಕ್ಕಕ್ಕೆ ಓಡಿಸಿ ಘಟ್ಟದಮಾರ್ಗವನ್ನು ಹಿಡಿದನು.

ಕುದುರೆ ಅತಿವೇಗವಾಗಿ ಓಡುತಿತ್ತು. ಸುಬಾಹು ವೀರಪುರವನ್ನು ಸೇರಲು ಬೆಟ್ಟದ ಮೇಲಿದ್ದ ತಿರುಪುಹಾದಿಯಲ್ಲಿ ಹೋಗಬೇಕು. ಆ ಮಾರ್ಗ ತುಂಬಾ ದುರ್ಗಮವಾದುದು. ಎರಡು ಕುದುರೆಗಳು ಎದುರುಬದುರಾಗಿ ಹೋಗುವಷ್ಟು ಮಾತ್ರ ಜಾಗವಿತ್ತು.

ಕುದುರೆಯನ್ನು ಬೆಟ್ಟದ ಮೇಲಕ್ಕೆ ಓಡಿ ಸುತ್ತ, ಸುಬಾಹು ಒಮ್ಮೆ ಹಿಂದಕ್ಕೆ ತಿರುಗಿ ನೋಡಿದನು. ಅವನನ್ನು ಹಿಂಬಾಲಿಸುತ್ತಿದ್ದ ಸವಾರರು ತನ್ನ ಕುದುರೆಗಳನ್ನು ಒಂದರ ಹಿಂದೆ ಒಂದನ್ನು ಸಾಲಾಗಿ ಓಡಿಸುತ್ತಿದ್ದರು. ಸುಬಾಹು ಮತ್ತು ಅವರ ನಡುವೆ ಬಾಣ ದೇಟಿಗೆ ತಾಕಿತಾಕದಷ್ಟು ದೂರವಿತ್ತು. ಆ ಅಂತರವನ್ನು ಮತ್ತಷ್ಟು ಹೆಚ್ಚು ಮಾಡಿ ಕೊಳ್ಳದಿದ್ದರೆ ತಾನು ಖಂಡಿತವಾಗಿ ಶತ್ರು ಬಾಣಕ್ಕೆ ಆಹುತಿಯಾಗ ಬೇಕಾಗುವುದೆಂದು ಸುಬಾಹು ಗ್ರಹಿಸಿದನು.

ಅವನು ಹೀಗೆ ಯೋಚಿಸುತ್ತಿರುವಲ್ಲಿ ಒಂದು ಬಾಣ ರಿವ್ವನೆ ಬಂದು ಅವನಿಗೆ ಹತ್ತುಹನ್ನೆರಡು ಗಜ ಹಿಂದಿದ್ದ ಬಂಡೆಗೆ ತಗುಲಿ ಎರಡು ತುಂಡಾಯಿತು.

ಸುಬಾಹು ತನ್ನ ಕುದುರೆಯನ್ನು ಚಬಕ ದಿಂದ ಮೆಲ್ಲನೆ ಹೊಡೆಯಲು, ಅದುನಾಗಾ ಲೋಟದಿಂದ ಓಡಹತ್ತಿತು. ಹಿಂದಿನಿಂದ ರಿವ್ವನೆ ಬಾಣಗಳ ಸದ್ದು, ಸವಾರರ ಕೂಗಾಟ ಕೇಳಬರುತಿತ್ತು.

ಕೊಂಚ ಹೊತ್ತಾದನಂತರ ಅವನು ಮತ್ತೆ ಹಿಂದಿರುಗಿ ನೋಡಿದನು. ಶತ್ರು ಸೈನಿಕರಿಗೂ ಅವನಿಗೂ ಇದ್ದ ಅಂತರವು ಮತ್ತಿಷ್ಟು ಹೆಚ್ಚಿತು. ಅವನಿಗೆ ಸ್ವಲ್ಪ ಸಮಾಧಾನವಾಯಿತು.

ಅವನನ್ನು ಅವರು ಅನುಸರಿಸುತ್ತಲೇ ಇದ್ದರು. ಬೆಟ್ಟವನ್ನು ಬಳಸಿ ತಿರುಪುಮುರು ಪಾಗಿದ್ದ ಮಾರ್ಗದಲ್ಲಿ ಸುಬಾಹು ತನ್ನ ಕುದುರೆ

ಯನ್ನು ಅತಿ ಎಚ್ಚರಿಕೆಯಿಂದ ಓಡಿಸುತ್ತಿದ್ದನು. ಅವನ ಬಲಗಡೆ ಗಗನವನ್ನು ಮುಟ್ಟುವಂತಹ ಬೆಟ್ಟ, ಎಡಗಡೆ ಅಗಾಧವಾದ ಹಳ್ಳವಿತ್ತು. ಕುದುರೆಯ ಕಾಲು ಕೊಂಚ ಜಾರಿದರೆ ಸಾಕು, ತಾನು ಕುದುರೆಯೊಂದಿಗೆ ಬಿದ್ದು ಚುಕ್ಕುಚೂರಾಗುವುದು ಖಂಡಿತ.

ಕತ್ತಲಾಗುತ್ತಿದ್ದುದರಿಂದ ದಾರಿಸಹ ಅಸ್ಪಷ್ಟವಾಗಿ ಕಾಣಿಸುತಿತ್ತು. ತನ್ನನ್ನು ಶತ್ರುಗಳು ಹಿಂಬಾಲಿಸುತ್ತಿರುವರೆಂದು ಕಣ್ಣಿಗೆ ಕಾಣಿಸದಿದ್ದರೂ, ಅವರ ಕುದುರೆಯ ಕಾಲಿನ ಗೊರಸುಗಳಿಗೆ ತಗಲಿ ಕೆಳಗೆ ಜಾರಿ ಅಗಾಧವಾದ ಕಂದಕದಲ್ಲಿ ಬೀಳುತ್ತಿದ್ದ ಕಲ್ಲುಗಳ ಶಬ್ದದಿಂದ ಅವನು ಗ್ರಹಿಸಿದನು. ಕೊಂಚ ಹೊತ್ತಿಗೆ ಕತ್ತಲಾಯಿತು.

ಅಂತೆಯೇ ಚಂದ್ರೋದಯವಾಯಿತು. ಬೆಟ್ಟದ ಮಾರ್ಗ ಮತ್ತಷ್ಟು ಓರೆಕೋರೆಯಾಗಿ ಹೊರಟಿತ್ತು. ಆ ಸಮಯದಲ್ಲಿ ಹಠಾತ್ತನೆ ಸುಬಾಹು ಶತ್ರುಭಟರನ್ನು ಕಂದಕದಾಚೆಯಿದ್ದ ದಾರಿಯಲ್ಲಿ ಕಂಡನು. ಕೇವಲ ಹತ್ತು ಹದಿನೈದು ನಿಮಿಷಗಳ ಮುಂಚೆ ಅವನು ಅದೇ ಮಾರ್ಗವಾಗಿ ಬಂದಿದ್ದನು. ಆಗ ಅವರು ಅವನಿಂದ ಬಹಳದೂರವಿದ್ದರು.

ಈಗ ಕಂದಕ ಅವರನ್ನು ಬೇರೆ ಮಾಡುತ್ತಿದ್ದರೂ, ಒಂದು ರೀತಿ ಅವರು ತುಂಬಾ ಸನಿಯದಲ್ಲೇ ಇದ್ದರು. "ಈಗ ಅವರು ಬಾಣ ಪ್ರಯೋಗಿಸಲು ಸದವಕಾಶವಿದೆ" ಎಂದುಕೊಂಡು ಸುಬಾಹು ಕುದುರೆಯಮೇಲಿಂದ ಕೆಳಗಿಳಿಯುವಷ್ಟರಲ್ಲಿ, ರಿವ್ವನೆ ಒಂದು ಬಾಣ





ಅವನ ಕುದುರೆಗೆ ತಗಲಿತು. ಕೂಡಲೇ ಆ ಕುದುರೆ ಮುಂದಿನ ಕಾಲುಗಳೆರಡನ್ನೂ ಮೇಲಕ್ಕೆ ಎತ್ತಿ, ಕರ್ಕಶವಾಗಿ ಕೆನೆಯುತ್ತಾ, ಕುರುಡಾದಂತೆ ಬಲಗಡೆಯಿದ್ದ ಬಂಡೆಗೆ ಡೀ ಹೊಡೆದುಕೊಂಡು, ದಭಾರನೆ ಪಕ್ಕಕ್ಕೆ ಉರುಳಿತು. ಅದರೊಂದಿಗೆ ಸುಬಾಹು ಸಹ ಕೆಳಗೆ ಬಿದ್ದನು. ಮರುಕ್ಷಣವೆ ಕುದುರೆ ನೋವಿನಿಂದ ನರಳುತ್ತಾ ಹಳ್ಳದಕಡೆ ಹೊರಳಿತು. ರಿಕಾಬಿನಲ್ಲಿ ಕಾಲು ಸಿಲುಕಿಕೊಂಡಿದ್ದ ಸುಬಾಹು ಸಹ ಅದರೊಂದಿಗೆ ಹಳ್ಳದ ಕಡೆಗೆ ಸೆಳೆಯಲ್ಪಟ್ಟನು. ಐದಾರುಸಲ ಹೊರಳಿದನಂತರ ತುಸ ಸಪಾಟಾಗಿದ್ದ ಸ್ಥಳದಲ್ಲಿ ಒಂದು ಮರದ ಕೊಂಬೆ ಸುಬಾಹುವಿನ ಕೈಗೆ ಸಿಕ್ಕಿತು. ಅವನು ಅದನ್ನು ಎರಡು ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡನು. ಆಗ ರಿಕಾಬು ಅವನ ಕಾಲಿನಿಂದ ಕಳಚಿಕೊಂಡಿತು. ಕುದುರೆಮಾತ್ರ ಸಂಕಟಪಡುತ್ತಾ ಬಡಬಡನೆ ಮತ್ತಿಷ್ಟು ದೂರ ಹೊರಳಿಕೊಂಡು ಹೋಗಿ ಧುಭೀಲನೆ ಕಂದಕದಲ್ಲಿ ಬಿದ್ದುಬಿಟ್ಟಿತು.

ಹಳ್ಳದ ಆಚೆಯಿದ್ದ ರಸ್ತೆಯಿಂದ ಜಯಘೋಷ ಹೊರಟಿತು. ಶತ್ರುಸವಾರರು ತನ್ನನ್ನು ಕೊನೆಗಾಣಿಸಿದೆವೆಂದು ಭ್ರಮೆಗೊಳ್ಳುತ್ತಿರಬಹುದೆಂದು ಸುಬಾಹು ಗ್ರಹಿಸಿದನು. ಕುದುರೆಯೊಂದಿಗೆ ಅವನೂ ಕಂದಕದಲ್ಲಿ ಬಿದ್ದು ನುಚ್ಚುನೂರಾಗಿರಬೇಕೆಂದು ಅವರು ಭಾವಿಸುತ್ತಿದ್ದರು.

ಸುಬಾಹು ಮರದಕೊಂಬೆಯಮೇಲೆ ತುಸವಾದರೂ ಅಲುಗಾಡದೆ ಕುಳಿತುಬಿಟ್ಟನು.



ಆ ಪ್ರದೇಶ ತುಸ ಕತ್ತಲಾಗಿದ್ದರೂ, ತಾನು ಅತ್ತಿತ್ತ ಕದಲಾಡಿದರೆ ಚಂದ್ರನ ಕಾಂತಿಯಲ್ಲಿ ಶತ್ರುಗಳು ತನ್ನನ್ನು ಕಂಡುಹಿಡಿದುಬಿಡ ಬಹುದು. ಆಗ ಒಂದೇ ಒಂದು ಬಾಣ ತನ್ನನ್ನು ಯಮುಸದನಕ್ಕೆ ಕಳುಹಿಸಲು ಸಾಕು!

ಸುಬಾಹು ಎಲೆಗಳ ಸಂದಿನಿಂದ ಶತ್ರುಗಳ ಚಲನವಲನಗಳನ್ನು ಸೂಕ್ಷ್ಮವಾಗಿ ನೋಡು ತ್ತಿದ್ದನು. ಅವರು ಕುದುರೆಗಳಮೇಲಿಂದ ಇಳಿದು ಹಳ್ಳದ ಅಂಚಿಗೆ ಬಂದು ಮೊಣ ಕಾಲೂರಿ ಕೆಳಗೆ ಬಗ್ಗಿ ನೋಡಿದರು. ನಂತರ ಅವರೆಲ್ಲ ತಮ್ಮ ತಮ್ಮ ಕುದುರೆಗಳನ್ನು ಸವಿಾ ಪಿಸಿ ಸ್ವಲ್ಪಹೊತ್ತು ಹರಟೆಕೊಚ್ಚಲಾರಂಭಿಸಿ ದರು. ಒಂದುವೇಳೆ ಅವರಿಗೆ ತನ್ನ ಇರುವು ತಿಳಿಯಿತೇನೋ ಎಂದು ಭಯಗೊಂಡಿದ್ದ



ಸುಬಾಹುಗೆ, ತಮ್ಮ ವಿಜಯವನ್ನು ಸೂಚಿಸು ವಂತೆ ಅವರು ನಗುವ ಶಬ್ದ ಕೇಳಿಸಿತು. ತರುವಾಯ ಅವರು ಕುದುರೆಗಳನ್ನೇರಿ ಬಂದ ಮಾರ್ಗದಲ್ಲೇ ಹೊರಟುಹೋದರು.

ಸುಬಾಹು ಈಗ ನಿರ್ಭಯವಾಗಿ ಉಸಿರು ಬಿಟ್ಟನು. ರಿಕಾಬಿನಲ್ಲಿ ಸಿಲುಕಿ ಕಾಲು ಉಳುಕಿ ನೋವಾಗುತ್ತಿತ್ತು. ಆದರೂ ಅವನಿಗೆ ಅದರ ಬಾಧೆ ತೋರಲಿಲ್ಲ. ತಾನು ಶತ್ರುಗಳ ಕೈಗೆ ಸಿಕ್ಕದೆ ತಪ್ಪಿಸಿಕೊಂಡುದಾಯಿತು. ಇನ್ನು ಮೇಲೆ ಸೂರ್ಯೋದಯವಾಗುವಷ್ಟರಲ್ಲಿ ವೀರಪುರವನ್ನು ಸೇರಿಕೊಂಡು ಚಂದ್ರವರ್ಮ ನಿಗೆ, ನಡುದಾರಿಯಲ್ಲಿ ನಡೆದ ಈ ಘಾತುಕ ವಾದ ಘಟನೆಯನ್ನು ವಿವರಿಸಿ ಹೇಳಿ, ಸರ್ಪ ಕೇತನ ಮೇಲೆ ಸೇಡು ತೀರಿಸಿಕೊಳ್ಳಲು ಉಪಾಯ ಯೋಚಿಸಬೇಕು.

ಶತ್ರುಸವಾರರು ಕಣ್ಮರೆಯಾದ ಕೂಡಲೇ ಸುಬಾಹು ಮರದಮೇಲಿಂದ ಕೆಳಗಿಳಿದನು. ಅವನ ಬಟ್ಟೆಗಳೆಲ್ಲಾ ಹರಿದು ಚಿಂದಿಯಾ ಗಿದ್ದುವು. ಮೈಯೆಲ್ಲಾ ತರಿಚಿಕೊಂಡು ರಕ್ತ ಕಾರುತಿತ್ತು. ಅವನು ಅಲ್ಲಿದ್ದ ಮರದ ಎಲೆಗ ಳನ್ನು ಬೊಗಸೆ ತುಂಬಾ ಕೊಯ್ದು, ಅವುಗ ಳನ್ನು ಹಿಂಡಿ, ಅದರ ರಸವನ್ನು ಗಾಯಕ್ಕೆ ಹಚ್ಚಿಕೊಂಡನು. ಆಗ ಅವನಿಗೆ ಚಿರತೆಯ ಆರ್ಭಾಟ ಕೇಳಿಸಿತು.

ಆ ಆರ್ಭಟ ಕೇಳಿ ಸುಬಾಹು ಬೆದರಿ ದನು. ಆ ಬೆಟ್ಟದ ಕಣಿವೆಯಲ್ಲಿ ಚಿರತೆ, ತೋಳ, ಕಿರುಬ ಮುಂತಾದ ಕ್ರೂರ ಪ್ರಾಣಿ

ಗಳು ಇರುವ ವಿಷಯ ಅವನಿಗೆ ನೆನಪಾಯಿತು. ಅವುಗಳ ಬಾಯಿಗೆ ಬೀಳದೆ ಪ್ರಾಣ ಉಳಿಸಿ ಕೊಳ್ಳಬೇಕಾದರೆ ಯಾವುದಾದರೊಂದು ಆಯುಧವಿರಬೇಕು. ಆದರೆ ತನ್ನ ಖಡ್ಗ ಮತ್ತು ಗುರಾಣಿ ಕುದುರೆಯ ಮೇಲಿಂದ ಉರುಳಿದಾಗ ಎತ್ತಲೋ ಬಿದ್ದುಹೋಗಿದ್ದುವು.

ಸುಬಾಹು ಅತ್ತಿತ್ತ ನೋಡಿ ಕೈಗೆ ಎಟಕಿದ ಬಲವಾದ ಕೊಂಬೆಯನ್ನು ಮುರಿದು ಕೈಯಲ್ಲಿ ಹಿಡಿದುಕೊಂಡನು. ತರುವಾಯ ಅಲ್ಲಿದ್ದ ಬಂಡೆಗಳನ್ನೂ, ಕೊಂಬೆಗಳನ್ನೂ ಆಸರೆ ಮಾಡಿಕೊಂಡು ಮೆಲ್ಲಮೆಲ್ಲನೆ ತೆವಳಿಕೊಂಡು ರಸ್ತೆಗೆ ಬಂದನು.

ಈಗ ವೀರಪುರದ ಮಾರ್ಗ ಅವನಿಗೆ ತಿಳಿದಿದೆ. ಅವನು ನಸುಬೆಳಕಿನಲ್ಲಿ ಅತ್ಯಂತ ಜಾಗರೂಕತೆಯಿಂದ ನಡೆಯುತ್ತಾ, ಮಧ್ಯರಾತ್ರಿ ಸಮಯಕ್ಕೆ ಬೆಟ್ಟದ ತಪ್ಪಲಿನಲ್ಲಿರುವ ಒಂದು ಗ್ರಾಮ ಪ್ರಾಂತವನ್ನು ಸೇರಿಕೊಂಡನು. ಗ್ರಾಮ ಇನ್ನಷ್ಟು ದೂರವಿರುವಾಗ, ದೀವಟಿಗೆಗಳ ಕಾಂತಿಯಲ್ಲಿ ಹಲವಾರು ಜನರು ಉಲ್ಲಾಸದಿಂದ ಮಾತನಾಡಿಕೊಳುತ್ತಿರುವುದನ್ನು ಸುಬಾಹು ಕಂಡನು. ಇಂತಹ ರಾತ್ರಿ ವೇಳೆ ಗ್ರಾಮವಾಸಿಗಳಿಗೆ ಊರಾಚೆ ಏನು ಕೆಲಸವಿರುತ್ತದೆ? ಬಹುಶಃ ಈ ದೀವಟಿಗೆಗಳು ದರೋಡೆಕಾರರದಿರಬಹುದೇನೋ ಎಂಬ ಸಂಶಯವಾಯಿತು. ಅಷ್ಟರಲ್ಲಿ ಅವನಿಗೆ ಕುದುರೆಯ ಗೊರಸಿನ ಶಬ್ದ ಕೇಳಿಸಿತು. ಅತಿವೇಗವಾಗಿ ಕುದುರೆಗಳನ್ನು ಓಡಿಸುತ್ತಿದ್ದ ಸವಾ




ರರು ಕೆಲವರು "ಇನ್ನೂ ಇಲ್ಲೇ ಕಾಲ ಕಳೆಯುತ್ತಿರುವಿರಾ? ಹೂಂ, ನಡಿಯಿರಿ, ನಡಿಯಿರಿ" ಎಂದು ಅವರಿಗೆ ಎಚ್ಚರಿಕೆ ಕೊಟ್ಟು ಮುಂದೆ ಸಾಗಿದರು.

ಈ ವಿಚಿತ್ರಸಂಘಟನೆ ಆಶ್ಚರ್ಯ ಅನುಮಾನಗಳಿಗೆ ಎಡೆಕೊಟ್ಟಿತು. ದೀವಟಿಗೆಗಳ ಬಳಿಯಿರುವವರು ದರೋಡೆಕಾರರಿರಲಾರರು. ಸವಾರರು ಧರಿಸಿದ್ದ ಉಡುಪನ್ನು ನೋಡಿದರೆ ಅವರು ಸೈನಿಕರಂತೆ ಕಾಣಿಸಿದರು. ಆದರೆ ಅವರು ವೀರಪುರದ ಸೈನಿಕರೇ? ಇಲ್ಲ ಸರ್ಪಕೇತನ ಕಡೆಯವರೇ? ಇಲ್ಲಿ ದೀವಟಿಗೆಗಳ ಬಳಿಯಿರುವ ಜನರೆಲ್ಲಾ ಹೋಗಬೇಕಾದ ಸ್ಥಳವು ಯಾವುದಿರಬೇಕು? ಈ ವಿಷಯಗಳನ್ನೆಲ್ಲಾ ತಿಳಿಯಬೇಕೆಂದರೆ ತಾನು



ದೀವಟಿಗೆಗಳಿರುವ ಸ್ಥಳಕ್ಕೆ ಹೋಗಬೇಕು. ಒಂದುವೇಳೆ ಅವರು ವೀರಪುರದ ಜನರೇ ಆಗಿದ್ದರೆ, ಅವರಿಂದ ಒಂದು ಕುದುರೆಯನ್ನು ಎರವಲುಪಡೆದು ವೀರಪುರವನ್ನು ಸೇರಬಹುದು. ಒಂದುವೇಳೆ ಶತ್ರುಗಳಾಗಿದ್ದರೆ.... ಸುಬಾಹು ತಾನು ತೊಟ್ಟಿದ್ದ ಬಟ್ಟೆಯನ್ನು ಒಮ್ಮೆ ನೋಡಿಕೊಂಡನು. ಆ ಹರಕು ಮುರಕುಬಟ್ಟೆಯಲ್ಲಿ ತನ್ನನ್ನು ಯಾರೂ ಗುರುತಿಸಲಾರರೆಂಬ ಧೈರ್ಯಬಂತು. ಅವನು ಮೆಲ್ಲನೆ ಆ ಜನರ ಗುಂಪನ್ನು ಸಮೀಪಿಸಿದನು.

ಆ ಜನರ ಗುಂಪಿನಲ್ಲಿದ್ದವನೊಬ್ಬನು "ಅದೋ, ಯಾರೋ ಬಿಕ್ಷುಕನು ಬರುತ್ತಿದ್ದಾನೆ. ಲೋ ತಿರುಕ, ನೀನು ಇನ್ನು ಮುಂದೆ ತಿರುಪೆಬೇಡಿ ತಿನ್ನುವ ಅಗತ್ಯವಿಲ್ಲ. ನಾವು ವೀರಪುರವನ್ನು ಕೊಳ್ಳೆ ಹೊಡೆಯುವೆವು. ನಮ್ಮೊಂದಿಗೆಬಾ. ನಿನಗೂ, ನಿನ್ನ ಸಂತತಿಗೂ ಸಾಕಾಗುವಷ್ಟು ಆಸ್ತಿಪಾಸ್ತಿ ಸಿಕ್ಕುತ್ತದೆ!'' ಎಂದ.

ಸುಬಾಹು ನಿರ್ವಿಣ್ಣನಾದನು. ಆದರೆ ಕ್ಷಣ ಮಾತ್ರದಲ್ಲಿ ಚೇತರಿಸಿಕೊಂಡು "ಅಗತ್ಯವಾಗಿ ಸ್ವಾಮಿ, ನಾನೂ ನಿಮ್ಮ ಸಂಗಡ ಬರುತ್ತೇನೆ. ತಿರುಕನಾದ ನನಗೆ ಆಸ್ತಿಯೇನೂ ಬೇಡ, ಎರಡು ಹೊತ್ತೂ ಹೊಟ್ಟೆ ತುಂಬಾ ಊಟ ಮಾತ್ರ ಸಿಕ್ಕಿದರೆ ಸಾಕು" ಎಂದನು.

ಮತ್ತೊಬ್ಬನು ಏನೋ ಹೇಳಲಿರುವಷ್ಟರಲ್ಲಿ ಕೆಲವು ಸವಾರರು ತಮ್ಮ ಕುದುರೆಗಳನ್ನು ವೇಗವಾಗಿ ಓಡಿಸಿಕೊಂಡು ಅಲ್ಲಿಗೆ ಬಂದು "ಸರ್ಪಕೇತನಿಗೆ ಜಯವಾಗಲಿ" ಎಂದು ಘೋಷಿಸಿದರು.

"ನಿಮ್ಮಲ್ಲಿ ಯಾರಾದರೂ ವೀರಪುರದವರು ಇದ್ದಾರೆಯೇ? ಚೆನ್ನಾಗಿ ನೋಡಿಕೊಳ್ಳಿರಿ. ಏಕೆಂದರೆ ನಂತರ ವಿಷಾದಿಸಿದರೆ ಪ್ರಯೋಜನವಿಲ್ಲ" ಎಂದನೊಬ್ಬ ಸವಾರ.

ಆಗ ಒಬ್ಬನು ಸುಬಾಹುಕಡೆ ಬೊಟ್ಟು ಮಾಡಿ "ನಾವೆಲ್ಲ ಪರಸ್ಪರ ಪರಿಚಯಸ್ಥರು. ಆದರೆ ಇವನು ಯಾರೋ ಹೊಸಬನು ಈಗಲೇ ಇಲ್ಲಿಗೆ ಬಂದಿದ್ದಾನೆ" ಎಂದ.

ಸವಾರರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು "ಹೇಯ್" ಎಂದು ಸುಬಾಹುಕಡೆ ತಮ್ಮ ಕುದುರೆಗಳನ್ನು ಓಡಿಸಿದರು. [ಇನ್ನೂ ಇದೆ]



# ಪ್ರತೀಕಾರ

ಹಠವನ್ನುಬಿಡದೆ ತ್ರಿವಿಕ್ರಮನು ಮತ್ತೊಮ್ಮೆ ಮರದಬಳಿಗೆ ಹೋಗಿ, ಮರದಮೇಲಿಂದ ಶವವನ್ನು ಕೆಳಕ್ಕೆ ಇಳಿಸಿ ಭುಜದಮೇಲೆ ಹಾಕಿಕೊಂಡು, ಮೌನವಾಗಿ ಮಸಣದತ್ತ ನಡೆಯುತೊಡಗಿದನು. ಆಗ ಶವದಲ್ಲಿದ್ದ ಬೇತಾಳ "ರಾಜನೇ ನೀನೇನೋ ತುಂಬಾ ಶೂರ, ಸಾಹಸಿ. ಆದರೂ ನಿನ್ನ ಸಾಹಸವನ್ನು ವಿನಾ ಕಾರಣ ಪ್ರದರ್ಶಿಸುವುದು ನನಗೆ ಅಚ್ಚರಿಯನ್ನುಂಟುಮಾಡಿದೆ. ಏಕೆಂದರೆ ಸಾಧಾರಣವಾಗಿ ಮಾನವರು ಸೇಡುತೀರಿಸಿಕೊಳ್ಳುವುದರಲ್ಲಿ ಅಪ್ರತಿಮ ಸಾಹಸ ತೋರುವರು. ಇದಕ್ಕೊಂದು ಉತ್ತಮನಿದರ್ಶನ ದುರ್ಗ. ಹೊತ್ತು ಕಳೆಯಲು ನಿನಗೆ ಅವಳ ಕಥೆಯನ್ನು ಹೇಳುತ್ತೇನೆ, ಕೇಳು" ಎಂದು ಹೀಗೆ ಹೇಳಲು ಪ್ರಾರಂಭಿಸಿತು ಬೇತಾಳ.

ಬಹಳಕಾಲದ ಹಿಂದೆ ವೈಶಾಲಿ ಎಂಬ ನಗರದಲ್ಲಿ ವಿನಯನೆಂಬ ನೇಕಾರನಿದ್ದನು. ಅವನು ದುರ್ಗ ಎಂಬ ಹುಡುಗಿಯನ್ನು



ಮದುವೆಯಾದನು. ವೈಶಾಲಿ ನಗರದ ರಾಜನು ಅಸಮರ್ಥನಾದುದರಿಂದ ಆ ನಗರದಲ್ಲಿ ಅರಾಜಕತೆ ಉಂಟಾಯಿತು. ಪ್ರಜೆಗಳಲ್ಲಿ ಅನೇಕ ಕಕ್ಷಿಪ್ರತಿಕಕ್ಷಿಗಳಾಗಿ, ಹೊಡದಾಟ ಬಡಿದಾಟಗಳಿಗೆ ಎಡೆಕೊಟ್ಟಿತು. ದುರ್ಗ ಸಂಸಾರಮಾಡಲು ಬಂದ ವರ್ಷವೇ ಈ ಹೊಡೆದಾಟಗಳು ಪ್ರಾರಂಭವಾದುವು. ಆ ನಗರದಲ್ಲಿ ವೀರಭದ್ರನೆಂಬ ಸಾಹುಕಾರ ನಿದ್ದನು. ಅವನಿಗೂ ವಿನಯನಿಗೂ ಬಹಳ ಕಾಲದಿಂದ ವೈರವಿತ್ತು. ದೇಶದಲ್ಲಿ ಅರಾಜಕತೆಯುಂಟಾದಕೂಡಲೇ ನಡು ಹಗಲಿನಲ್ಲೇ ಕೊಲೆಗಳು ಆಗ ತೊಡಗಿದುವು. ಸಮಯ ಸಾಧಿಸಿ ವೀರಭದ್ರನು ತನ್ನ ವೈರಿಯಾದ ವಿನಯನನ್ನು ಕೊಲೆಮಾಡಿಸಿದನು.

ಕೊಲೆಯ ಸಂಗತಿ ನಗರದಲ್ಲಿದ್ದವರಿಗೆಲ್ಲಾ ತಿಳಿಯಿತು. ಈ ರೀತಿ ಕೊಲೆಗಳಾಗುವುದು ತೀರಾ ಸಾಮಾನ್ಯವಾಗಿದ್ದುದರಿಂದ ಯಾರೂ ಅದರಕಡೆ ಪ್ರತ್ಯೇಕವಾಗಿ ಗಮನಕೊಡಲಿಲ್ಲ. ಹಂತಕನಿಗೆ ಶಿಕ್ಷೆ ವಿಧಿಸಲಿಲ್ಲ. ಯಾರೋ ಕೆಲವರು ವಿನಯನ ಶವವನ್ನು ಮನೆಗೆ ತಂದು ಸೇರಿಸಿದರು. ಗಂಡನೊಂದಿಗೆ ದುರ್ಗ ಒಂದು ವರ್ಷ ಕಾಲವಾದರೂ ನೆಟ್ಟಗೆ ಸಂಸಾರ ಮಾಡಲಿಲ್ಲ. ಗಂಡನ ಶವವನ್ನು ಕಂಡು ಅವಳು ನಿಶ್ಚೇಷ್ಟಿತಳಾದಳು. ಅವಳ ಕಣ್ಣಿಂದ ಒಂದು ತೊಟ್ಟು ನೀರಾದರೂ ತೊಟ್ಟಿಕ್ಕಲಿಲ್ಲ. ಗಂಡನೊಂದಿಗೆ ಸಹಗಮನಮಾಡಲು ನಿಶ್ಚಯಿಸಿದಳು. ಆದರೆ ಮರುಕ್ಷಣವೇ ತನ್ನ ಅಭಿಪ್ರಾಯವನ್ನು ಬದಲಿಸಿಕೊಂಡಳು.

ವಿನಯನ ಕೊಲೆಯಾದಾಗ ದುರ್ಗ ಆರು ತಿಂಗಳ ಬಸುರಿ, "ನನ್ನ ಹೊಟ್ಟೆಯಲ್ಲಿ ಮಗನು ಹುಟ್ಟುತ್ತಾನೆ. ಅವನು ಬೆಳೆದು ದೊಡ್ಡವನಾಗಿ ತನ್ನ ತಂದೆಯನ್ನು ಕೊಲೆ ಮಾಡಿದವನಮೇಲೆ ಸೇಡುತೀರಿಸಿಕೊಳ್ಳುತ್ತಾನೆ. ಅವನಿಂದ ವೀರಭದ್ರನನ್ನು ಕೊಲ್ಲಿಸಿದ ಹೊರತು ನಾನು ಸಾಯಬಾರದು. ನಾನೀಗ ಸತ್ತುಹೋದರೆ ನನ್ನ ಪತಿಗಾಗಿ ಸೇಡುತೀರಿಸಿಕೊಳ್ಳುವವರು ಯಾರಿದ್ದಾರೆ?" ಎಂದು ಅವಳು ಯೋಚಿಸಿದಳು.

ವಿನಯನ ಮರಣದಿಂದ ದುರ್ಗ ಅನಾಥೆಯಾದಳು. ಅವಳಿಗೆ ತೌರಿನಕಡೆಯಾಗಲೀ, ಪತಿಯಕಡೆಯಾಗಲೀ ಯಾರೂ ಇರಲಿಲ್ಲ.

ಅವಳಿಗೆ ಈಗ ಸೇಡೆ ಬಂಧುಮಿತ್ರರಾದರು! ತುಂಬು ಗರ್ಭಿಣಿಯಾಗಿದ್ದರೂ ಸಹ ರಾತ್ರಿ ಹಗಲು ನೂಲು ನೂತು, ಅದನ್ನು ಪೇಟೆಯಲ್ಲಿ ಮಾರಿ, ಬಂದ ಹಣದಿಂದ ತನ್ನ ಮತ್ತು ತನ್ನ ಗರ್ಭದಲ್ಲಿದ್ದ ಮಗುವನ್ನು ಪೋಷಿಸಿಕೊಳ್ಳುತ್ತಿದ್ದಳು. ಅವಳ ಒಂಟಿ ಜೀವನ ಹೀಗೇ ಸಾಗುತಿತ್ತು. ಅವಳ ಹೃದಯದಲ್ಲಿ ಉರಿಯುತ್ತಿದ್ದ ಸೇಡು ಅವಳ ದೇಹದಂಡನೆಯಿಂದ ತೀವ್ರಗೊಳ್ಳುತಿತ್ತು.

ಪ್ರಸವವಾಗುವ ತನಕ ಅವಳು ದುಡಿಯುತ್ತಲೇ ಇದ್ದಳು. ಯಾರ ಸಹಾಯವೂ ಇಲ್ಲದೆ ಅವಳು ತನ್ನ ಕೋರಿಕೆಯಂತೆ ಗಂಡು ಶಿಶುವನ್ನು ಹೆತ್ತಳು. ಇನ್ನೂ ಕಣ್ಣು ತೆರೆಯದ ಹಾಲು ಹಸುಳೆಯೊಂದಿಗೆ "ಮಗೂ, ನೀನು ಜನ್ಮತಾಳಿದ್ದರ ರಹಸ್ಯ ಬಲ್ಲೆಯಾ? ನಿನ್ನ ಕರ್ತವ್ಯವೇನೋ ತಿಳಿದಿದೆಯೇ? ನಿನ್ನ ತಂದೆಯನ್ನು ಕೊಂದ ನೀಚ ವೀರಭದ್ರನಮೇಲೆ ನೀನು ಸೇಡು ತೀರಿಸಿಕೊಳ್ಳಬೇಕು. ತಿಳಿಯಿತೇ? ನಿನ್ನಿಂದ ಆ ಕಾರ್ಯವನ್ನು ಮಾಡಿಸಲು ನಾನು ಬೆಂಕಿಯಲ್ಲಿ ಹಾರೆಂದರೂ ಹಾರುವೆನು" ಎಂದು ಅವಳು ಹೇಳುವಳು. ಮಗನಿಗೆ ವಿಕ್ರಮನೆಂದು ಹೆಸರಿಟ್ಟಳು.

ವಿಕ್ರಮನು ಹುಟ್ಟಿದ ಕೊಂಚ ದಿನಗಳಿಗೆ ಇಂದ್ರಸೇನ ಮಹಾರಾಜನು ವೈಶಾಲಿ ನಗರವನ್ನು ವಶಪಡಿಸಿಕೊಂಡು, ನಗರದಲ್ಲಿ ಶಾಂತಿ ಸ್ಥಾಪನೆ ಮಾಡಿದನು. ಇಂದ್ರಸೇನನು ಪರಾಕ್ರಮಿ. ಮಹಾಧೀರ. ಆತನು ಬೇಟೆಗೆ



ಹೋದರೆ ಹುಲಿ, ಸಿಂಹ ಮುಂದಲಾದ ದುಷ್ಟ ಮೃಗಗಳನ್ನು ಜೀವದೊಂದಿಗೆ ಹಿಡಿದು ತರುವನು. ಒಮ್ಮೆ ಆತನು ಬೇಟೆಗೆ ಹೋಗಿ ಭಾರಿ ಸಿಂಹವನ್ನು ಹಿಡಿದು ತಂದನು. ತನ್ನ ಪರಾಕ್ರಮದ ಸಂಕೇತವಾಗಿ, ಆತನು ಸಿಂಹವನ್ನು ವೈಶಾಲಿನಗರಕ್ಕೆ ಕಳುಹಿಸಿ, ನಗರದ ಮಧ್ಯೆ ಅದಕ್ಕೊಂದು ಬೋನುಕಟ್ಟಿಸಿ, ಅದರ ಪೋಷಣೆಗೆ ಉಚಿತ ಏರ್ಪಾಟುಗಳನ್ನು ಮಾಡಿದನು. ವೈಶಾಲಿನಗರದ ಪೌರರಿಗೆ ಸಿಂಹಗೃಹ ಒಂದು ದೇವಾಲಯದಂತಾಯಿತು. ಅವರು ಸಿಂಹವನ್ನು ಕುರಿತು ಕೇಳಿದ್ದರೇಹೊರತು, ಜೀವದೊಂದಿಗಿದ್ದ ಸಿಂಹವನ್ನು ಕಂಡಿರಲಿಲ್ಲ. ಅದರಲ್ಲೂ ಅದೊಂದು ಅಪೂರ್ವವಾದ ಸಿಂಹ. ಅದರ ಕೊರಳಿನಮೇಲಿದ್ದ ಜೂಲು ಒಂದು

ಪೊದೆಯಂತೆ ತೋರುತಿತ್ತು. ಕೆಲವು ಮೂಢ ಜನರು ಆ ಸಿಂಹವನ್ನು ಸಾಕ್ಷಾತ್ ನರಸಿಂಹ ಸ್ವಾಮಿಯೆಂದು ಭಾವಿಸಿ ಕೈ ಮುಗಿಯು ತ್ತಿದ್ದರು. ದಿನಾ ಸಾವಿರಾರು ಸ್ತ್ರೀ ಪುರು ಷರು, ಮಕ್ಕಳು ಮರಿಗಳು ಸಿಂಹವನ್ನು ನೋಡಲು ಸಿಂಹಗೃಹಕ್ಕೆ ಹೋಗುತ್ತಿದ್ದರು. ಈ ಕೇಸರಿಯನ್ನು ಕಾಣಲು ಅಕ್ಕಪಕ್ಕದ ಗ್ರಾಮಸ್ಥರೇ ಅಲ್ಲದೆ ದೂರದೇಶಗಳಿಂದಲೂ ಜನ ಬರುವುದುಂಟು.

ಸಿಂಹವೂಸಹ ದೇವಸ್ಥಾನದಲ್ಲಿ ವಿಗ್ರಹ ವಿರುವಂತೆ ಗಂಭೀರವಾಗಿ ವರ್ತಿಸುತಿತ್ತು. ಎಷ್ಟು ಜನ ಬಂದರೂ ಅವರಕಡೆ ನೋಡುತ್ತಿರ ಲಿಲ್ಲ. ಅದರ ನೋಟ ಎತ್ತಲೋ ಇರುತಿತ್ತು. ಯಾರಾದರೂ ಅದನ್ನು ಮಾತನಾಡಿಸಲು ಹೊರಟರೆ ಅದು ಕಿವಿಯಮೇಲೆ ಹಾಕಿ ಕೊಳ್ಳುತ್ತಿರುವಂತೆ ಕಾಣಿಸಲೇ ಇಲ್ಲ.

ಹೀಗೆ ಕೊಂಚ ಕಾಲವಾದ ನಂತರ ಒಂದು ದಿನ ಅಕಸ್ಮಾತ್ತಾಗಿ ಸಿಂಹವು ತನ್ನ ಬಂಧನ ದಿಂದ ಹೊರಕ್ಕೆಬಂದು ಬಿಟ್ಟಿತು. ಅಂದು ಮುಂಜಾನೆ ಅದಕ್ಕೆ ಆಹಾರ ಕೊಡುವ ನೌಕ ರನು ಸಿಂಹಗೃಹದ ಬಾಗಿಲಿಗೆ ಚಿಲುಕ ಹಾಕುವುದನ್ನು ಮರೆತುಬಿಟ್ಟಿದ್ದನು. ಅವನು ಹೋದ ಕೊಂಚಹೊತ್ತಿಗೆ ಸಿಂಹ ತನ್ನ ಪಂಜಾ ದಿಂದ ಕಬ್ಬಿಣದ ಬಾಗಿಲನ್ನು ಮುಂದಕ್ಕೆ ನೂಕಿ ಹೊರಗೆಬಂದು, ಗಂಭೀರವಾಗಿ ರಸ್ತೆ ಯಲ್ಲಿ ನಡೆಯಲಾರಂಭಿಸಿತು. ಅದು ಬಂಧನ ದಿಂದ ಪರಾರಾಗಿ ಓಡಿಹೋಗುತ್ತಿರುವ ಪ್ರಾಣಿಯಂತೆ ತೋರಲಿಲ್ಲ.



ರಸ್ತೆಯಲ್ಲಿ ನಡೆಯುತ್ತಿದ್ದ ಸಿಂಹವನ್ನು ಕಂಡಕೂಡಲೇ ಜನರಲ್ಲಿ ಹಾಹಾಕಾರವೆದ್ದಿತು. ಸಾವನ್ನು ಕಂಡು ಹೆದರಿ ಓಡುವಂತೆ ಜನ ಮನೆಗಳನ್ನು ಹೊಕ್ಕು ಬಾಗಿಲು ಹಾಕಿಕೊಂಡರು. ಎಲ್ಲರೂ ಭಯದಿಂದ ಕಂಪಿಸುತ್ತಿದ್ದರು. ಸಿಂಹ ಬೋನಿನಿಂದ ತಪ್ಪಿಸಿಕೊಂಡ ಸುದ್ದಿ ಕಾಳ್ಗಿಚ್ಚಿನಂತೆ ನಗರದಲೆಲ್ಲಾ ಹರಡಿತು. ಮೋಡಿ ಹಾಕಿದಂತೆ ವೈಶಾಲಿ ನಗರದ ರಸ್ತೆಗಳು ಬರಿದಾದುವು.

ಜನರ ತಳಮಳದಕಡೆ ಸಿಂಹ ಗಮನಿಸಲಿಲ್ಲ. ಮಾಮೂಲಿನಂತೆ ಅದರ ನೋಟ ಎತ್ತಲೋ ಸಾಗಿತ್ತು. ತನ್ನನ್ನು ಕಂಡು ಕಂಬಿಕೀಳುತ್ತಿದ್ದ ಜನರನ್ನು ಅದು ಅಟ್ಟಿಸಿಕೊಂಡು ಹೋಗಲಿಲ್ಲ. ತನ್ನನ್ನು ಮತ್ತೆ ಬಂಧಿಸುವರೆಂಬ ಹೆದರಿಕೆಯೂಸಹ ಅದಕ್ಕೆ ಇರಲಿಲ್ಲವೆಂಬಂತೆ ತೋರಿತು. ವಾಯುವಿಹಾರಕ್ಕೆ ಹೋಗುವ ರಾಜಾಧಿರಾಜನಂತೆ ಠೀವಿಯಿಂದ ಹೆಜ್ಜೆ ಹಾಕುತ್ತಾ, ಅತ್ತಿತ್ತ ನೋಡದೆ ನೆಟ್ಟಗೆ ಊರಾಚೆಯಿದ್ದ ಮೈದಾನಕ್ಕೆ ಹೊರಟಿತು. ಆಗ ಮೈದಾನದಲ್ಲಿ ಕೆಲವಾರು ಮಕ್ಕಳು ಆಟವಾಡಿಕೊಳ್ಳುತ್ತಿದ್ದರು. ಸಿಂಹವು ತಪ್ಪಿಸಿಕೊಂಡ ವಾರ್ತೆ ಊರೆಲ್ಲ ಹಬ್ಬಿದ್ದರೂ ಈ ಮಕ್ಕಳಿಗೆ ಆ ವಿಷಯವೇನೂ ತಿಳಿಯದು. ಹಠಾತ್ತನೆ ತಮ್ಮ ಬಳಿಗೆ ಬರುತ್ತಿದ್ದ ಸಿಂಹವನ್ನು ಕಂಡು ಅವರು ಚೀರುತ್ತಾ ದಿಕ್ಕುದಿಕ್ಕಿಗೆ ಓಡಿದರು. ಆದರೆ ಅವರು ಹಾಗೆ ಓಡುತ್ತಿದ್ದಾಗ ಒಬ್ಬ ಹುಡುಗನು ಕಾಲು ಎಡವಿ ಬಿದ್ದುಬಿಟ್ಟನು. ಮಕ್ಕಳು ಆಟವಾಡುವುದನ್ನು





ಅವಳು ಭಯದಿಂದ ತಲ್ಲಣಿಸಿದಳು. ತನ್ನ ಮಗನು ಇತರ ಮಕ್ಕಳೊಂದಿಗೆ ಮೈದಾನದಲ್ಲಿ ಆಟವಾಡುತ್ತಿರುವುದನ್ನು ಕೊಂಚಹೊತ್ತಿಗೆ ಮುಂಚೆ ಅವಳು ನೋಡಿದ್ದಳು. ಸಿಂಹವು ತನ್ನ ಮಗನಿಗೆ ಹಾನಿಮಾಡಿದರೆ ತನ್ನ ಜೀವನವೇ ಶೂನ್ಯವಾಗುವುದು. ಇಷ್ಟುದಿನ ಆರಿ ಹೋಗದಂತೆ ಕಾಪಾಡಿಕೊಂಡು ಬಂದ ಸೇಡಿನ ದೀಪ ನಂದಿಹೋಗುವುದು.

ದುರ್ಗ ದಢಾರನೆ ಬಾಗಿಲು ತೆರೆದು, ಹೊರಗೆಬಂದು, ಮೈದಾನದಕಡೆ ಧಾವಿಸಿ ನಡೆದಳು. ಸಿಂಹ ತನ್ನನ್ನು ಕೊಲ್ಲಬಹುದೆಂಬ ಭಯವಾದರೂ ಅವಳಿಗಿರಲಿಲ್ಲ. ಆವಶ್ಯಕವಾದರೆ ಸಿಂಹದೊಂದಿಗೆ ಹೋರಾಡಿಯಾದರೂ ತನ್ನ ಮಗನನ್ನು ಕಾಪಾಡಿಕೊಳ್ಳಲು ಅವಳು ಸಿದ್ಧಳಿದ್ದಳು.

ವೇಗವಾಗಿ ಹೋಗಿ ಅವಳು ಮೈದಾನವನ್ನು ತಲುಪಿದಳು. ಅಲ್ಲಿ ಸಿಂಹದ ಕಾಲು ಕೆಳಗೆ ಅಂಗಾತ ಬಿದ್ದಿದ್ದ ತನ್ನ ಮಗನನ್ನು ಕಂಡಳು. ಮಗು ಅಲುಗಾಡುತ್ತಿರಲಿಲ್ಲ. ಸತ್ತುಹೋಗಿರುವಂತೆಯೂ ಅವಳಿಗೆ ಕಾಣಿಸಲಿಲ್ಲ. ಅಲ್ಲದೆ, ಸನಿಯದಲ್ಲಿ ಎಲ್ಲೂ ರಕ್ತದ ಕಲೆಗಳೂ ಕಾಣಿಸಲಿಲ್ಲ. ದುರ್ಗ ಉಸಿರು ಬಿಗಿಹಿಡಿದು ಮೆಲ್ಲನೆ ಅಡಿಯಿಡುತ್ತ ಸಿಂಹವನ್ನು ಸಮೀಪಿಸಿದಳು. ಸಿಂಹದ ದೃಷ್ಟಿ ಆಗಲೂ ಎತ್ತಲೋ ಇತ್ತು. ಅದು ಒಮ್ಮೆಯಾದರೂ ತನ್ನ ತಲೆಯನ್ನು ಅವಳಕಡೆಗೆ ಹೊರಳಿಸಿ ನೋಡಲಿಲ್ಲ.

ಕಂಡು ಆ ಕೇಸರಿಗೂ ಆಟವಾಡುವ ಮನಸ್ಸಾಗಿರಬಹುದು. ಅದು ಮೆಲ್ಲನೆ ನೆಗೆಯುತ್ತ, ಕುಣಿಯುತ್ತ ಕೆಳಗೆ ಬಿದ್ದಿದ್ದ ಹುಡುಗನಬಳಿ ಸೇರಿ, ಅವನ ಶರೀರದಮೇಲೆ ತನ್ನ ಕಾಲನ್ನು ಮೆದುವಾಗಿಟ್ಟು, ಹಾಗೇ ಸುಮ್ಮನೆ ನಿಂತುಕೊಂಡಿತು.

ಕೆಳಗೆಬಿದ್ದ ಹುಡುಗನು ದುರ್ಗಳ ಮಗ ವಿಕ್ರಮ. ಪುರಜನರೆಲ್ಲ ಮನೆಗಳನ್ನು ಸೇರಿ, ಬಾಗಿಲು ಹಾಕಿಕೊಂಡಿದ್ದರೂ, ಸಿಂಹದ ಚಲನವಲನೆಗಳನ್ನು ಎಲ್ಲರೂ ಗಮನಿಸುತ್ತಿದ್ದರು. ಅದು ಎತ್ತ ಹೋಗುತ್ತಿದೆ, ಏನು ಮಾಡುತ್ತಿದೆ ಎಂಬ ವಿಷಯುಗಳು ಮನೆಯಲ್ಲಿದ್ದವರಿಗೆಲ್ಲಾ ತಿಳಿಯುತಿತ್ತು. ಸಿಂಹ ಮೈದಾನದಕಡೆ ಹೋದ ವಿಷಯ ದುರ್ಗಳಿಗೆ ತಿಳಿದಕೂಡಲೇ

ದುರ್ಗ ಸಿಂಹದ ಮುಂದೆ ನಿಂತು, ಕಂಪಿಸುವ ಕಂಠದಿಂದ "ಸ್ವಾಮಿ, ನರಸಿಂಹ ಸ್ವಾಮಿ, ನನ್ನ ಮಗನನ್ನು ಆಹುತಿ ತೆಗದು ಕೊಳ್ಳ ಬೇಡ. ನನಗೆ ಕೊಟ್ಟುಬಿಡು. ಅವನು ಹೊರಟು ಹೋದರೆ ನನಗೆ ಈ ಪ್ರಪಂಚದಲ್ಲಿ ಯಾರೂ ದಿಕ್ಕಿಲ್ಲ" ಎಂದಳು. ಸಿಂಹ ಅವಳ ಪ್ರಾರ್ಥನೆಯನ್ನು ಕಿವಿಯಮೇಲೆ ಹಾಕಿ ಕೊಂಡಂತೆ ತೋರಲಿಲ್ಲ.

"ನನ್ನ ಪತಿಯನ್ನು ದುಷ್ಟ ವೀರಭದ್ರ ಕೊಲೆಮಾಡಿದನು. ನಾನು ಒಂದುವರ್ಷ ಕಾಲವಾದರೂ ಗಂಡನೊಂದಿಗೆ ಸಂಸಾರ ಮಾಡಲಿಲ್ಲ. ಅವನು ನನ್ನ ಬಾಳನ್ನು ಮಣ್ಣು ಗೂಡಿಸಿದನು. ನನ್ನ ಸೇಡುತೀರಿಸಿ ಕೊಳ್ಳಲು ನನ್ನ ಮಗನೇ ನನಗೆ ಆಧಾರ. ನೀನು ಇವನನ್ನು ಬಲಿ ತೆಗೆದು ಕೊಂಡರೆ ನಾನು ಪಟ್ಟ ಕಷ್ಟವೆಲ್ಲಾ ನಿರರ್ಥಕವಾಗುವುದು." ಎಂದು ಹೇಳುತ್ತಾ ದುರ್ಗ ಮುಂದೆ ಸಾಗಿ ಸಿಂಹವನ್ನು ತೀರಾ ಸಮೀಪಿಸಿದಳು.

ಎಂದೂ ಯಾರಕಡೆಯೂ ನೋಡದ ಸಿಂಹ ತಲೆ ತಿರುಗಿಸಿ ದುರ್ಗಳ ಕಡೆ ಒಮ್ಮೆ ನೋಡಿತು. ಬಹುಶಃ ದುರ್ಗ ಹೇಳಿದ ಮಾತುಗಳು ಅದಕ್ಕೆ ಅರ್ಥವಾಯಿತೋ ಏನೋ? ದುರ್ಗಳಿಗೆ ಮೊಂಡುಧೈರ್ಯ ಬಂತು. ಅವಳು ಮುಂದಕ್ಕೆ ಬಾಗಿ ಮಗನ ಕೈಹಿಡಿದು "ನರಸಿಂಹ ಸ್ವಾಮಿ, ತಂದೆಯೇ, ನನ್ನ ಮಗನನ್ನು ತೆಗೆದು ಕೊಳ್ಳುತ್ತಿದ್ದೇನೆ. ನಿನ್ನ ಪಂಜಾ ದಯವಿಟ್ಟು ಬಿಚ್ಚಬೇಡಪ್ಪಾ, ನಿನ್ನ ಉಗುರು ತಗಲಿ



ನನ್ನ ಮುದ್ದು ಕಂದಮ್ಮನ ಶರೀರ ಗಾಯಗೊಂಡೀತು. ಆಯಿತು, ಒಂದು ಕ್ಷಣ" ಎಂದು ಮಗುವನ್ನು ಸಿಂಹದ ಕಾಲು ಕೆಳಗಿನಿಂದ ಮೆಲ್ಲನೆ ಎಳೆದುಕೊಂಡಳು.

ಸಿಂಹದ ದೃಷ್ಟಿ ಮತ್ತೆ ಎತ್ತಲೋ ತಿರುಗಿತು. ಅದು ದುರ್ಗಳ ಕಡೆಯಾಗಲೀ, ಅವಳು ಮೆಲ್ಲನೆ ಎಳೆದುಕೊಳ್ಳುತ್ತಿದ್ದ ಮಗುವಿನ ಕಡೆಯಾಗಲೀ ನೋಡಲಿಲ್ಲ. ತನ್ನ ಮಗನನ್ನು ಎದೆಗಪ್ಪಿಕೊಂಡು ಮೆಲ್ಲನೆ ಅಡಿಯಿಡುತ್ತಾ ದುರ್ಗ ಅಲ್ಲಿಂದ ಬಂದು ಬಿಟ್ಟಳು. ತೀರಾ ಆಪತ್ತು ದೂರವಾದ ನಂತರ ಅವಳಿಗೆ ಆನಂದದೊಂದಿಗೆ, ಆಯಾಸವೂ ಆಯಿತು. ಮಗುವಿಗೆ ತೃಣವಾದರೂ ಗಾಯವಾಗಲಿಲ್ಲ. "ಮಗು" ಎಂದು ಅವಳು ಕರೆದಳು.

"ಅಮ್ಮ" ಎಂದ ಆ ಬಾಲಕ. ಕೂಡಲೇ ದುರ್ಗ ಅವನನ್ನು ಎತ್ತಿಕೊಂಡು ನಿರ್ಜನವಾದ ರಸ್ತೆಯಲ್ಲಿ ಹಿಂದಿರುಗಿ ಬರುತ್ತ "ಮಗೂ, ಸಿಂಹದೊಂದಿಗೆ ನಾನು ಹೇಳಿದ ಮಾತುಗಳನ್ನೆಲ್ಲಾ ಕೇಳಿದೆಯಷ್ಟೇ? ನಾನು ಹೇಳಿದುದು ನಿನಗೆ ಅರ್ಥವಾಯಿತೋ?" ಎಂದು ಕೇಳಿದಳು.

"ತಿಳಿಯಿತು ಅಮ್ಮಾಜಿ" ಎಂದ ವಿಕ್ರಮ.

ಸಿಂಹದ ಬಳಿಯಿಂದ ತನ್ನ ಮಗನನ್ನು ತಂದುಕೊಳ್ಳುತ್ತಿದ್ದ ದುರ್ಗಳನ್ನು ಅನೇಕರು ನೋಡಿ ಅಚ್ಚರಿಪಟ್ಟರು. "ಅವನು ವರಪುತ್ರ. ಇಲ್ಲದಿದ್ದರೆ ಸಿಂಹದ ಕೈಗೆ ಸಿಕ್ಕಿ, ಮತ್ತೆ ಜೀವದಿಂದ ಬರುವುದೆಂದರೇನು?" ಎಂದು ಹೇಳಿದರು. ಅಂದಿನಿಂದ ಅವನಿಗೆ ವಿಕ್ರಮನೆಂಬ ಹೆಸರಿನ ಬದಲಾಗಿ, ಸಿಂಹದತ್ತ ಎಂಬ ಹೆಸರೇ ಜನರಿಂದ ಸಾರ್ಥಕನಾಮವಾಗಿ ಬಂತು.

ದುರ್ಗ ತನ್ನ ಮಗನನ್ನು ತಂದುಕೊಂಡ ಕೊಂಚ ಹೊತ್ತಿಗೆ ರಾಜನು ಕಳುಹಿಸಿದ ಭಟರು ಬಂದು ಸಿಂಹವನ್ನು ಬೋನಿಗೆ ಸೇರಿಸಿ ಮತ್ತೆ ಸಿಂಹ ಗೃಹದಲ್ಲಿಟ್ಟರು. ಅದು ಅವರಿಗೆ ಎದುರು ಬೀಳಲಿಲ್ಲ.

ಈ ಘಟನೆ ನಡೆಯುವವರೆಗೂ ವೀರಭದ್ರನು ಸುದಿನಗಳನ್ನು ಅನುಭವಿಸಿದನು. ಅವನು ಮುಟ್ಟಿದ್ದೆಲ್ಲಾ ಚಿನ್ನವಾಗುತಿತ್ತು. ಅನೇಕ ಜನ ಮಕ್ಕಳು ಮರಿಗಳಾದರು. ಅವನ ಮನೆ ಶೋಭಯಮಾನವಾಗಿ ಸದಾ ಕಳಕಳಿಸುತಲಿತ್ತು. ಆದರೆ ಸಿಂಹ ತಪ್ಪಿಸಿಕೊಂಡ ದಿನದಿಂದ ಅವನಿಗೆ ದುರ್ದಿನಗಳು



ಪ್ರಾಪ್ತವಾದುವು. ಅನಿರೀಕ್ಷಿತವಾಗಿ ಅವನ ಹೆಂಡತಿ ಸತ್ತುಹೋದಳು. ಮಕ್ಕಳು ಮರಿ ಒಬ್ಬೊಬ್ಬರಾಗಿ ಯಾವುದೋ ಕಾಯಿಲೆ ಕಸಾಯಿಲೆಗಳಿಂದ ಸತ್ತುಹೋದರು. ವೀರಭದ್ರನ ಆಸೆ ಸಹ ಕೊಂಚಕೊಂಚವಾಗಿ ಕರಗಿ ಹೋಯಿತು. ವೀರಭದ್ರನಿಗೆ ಹಿಂದೆಂದೂ ಪಾಪಭೀತಿ ಎಂಬುದಿರಲಿಲ್ಲ. ಆದರೆ ಈಗೀಗ ಅದು ತಲೆ ಎತ್ತಿತು. "ವಿನಯನನ್ನು ಕೊಲೆಮಾಡಿದ ಪಾಪವನ್ನು ಅನುಭವಿಸುತ್ತಿದ್ದೇನೆ. ಆ ಸಿಂಹ ಸಾಧಾರಣವಾದ ಕೇಸರಿಯಲ್ಲ. ಅದು ದೈವಕ ಸಂಭೂತವಾದುದು. ಅಂತಲೇ ಅದು ವಿನಯನ ಮಗನನ್ನು ನನಗಾಗಿ ಉಳಿಸಿತು. ನನಗೆ ಅವನಿಂದಲೇ ಸಾವು ಸಿದ್ಧ" ಎಂದುಕೊಳ್ಳುತ್ತಿದ್ದನು.

ವರ್ಷಗಳು ಕಳೆದಂತೆ ಸಿಂಹದತ್ತನು ಮೈತುಂಬಿಕೊಂಡು ಬೆಳೆಯುತ್ತಿದ್ದನು. ಅವನು ವೈಶಾಲಿಯಪುರವಾಸಿಗಳೆಲ್ಲರ ಮಗುವಾದನು. ಅವನೇನು ಬೇಕೆಂದರೂ ಯಾರೋ ಒಬ್ಬರು ಅವನಿಗೆ ತಂದುಕೊಡುವರು. ದುರ್ಗಳ ಕಷ್ಟಗಳೂ ಸಹ ತೀರಿದುವು. ಅವಳಿಗೀಗ ಬೇಕಾದ ತಿಂಡಿತೀರ್ಥಗಳು ಸಿದ್ಧವಾಗಿರುತ್ತಿದ್ದುವು. ಎಲ್ಲರೂ ಆಕೆಯನ್ನು ಆದರಿಸುವರು, ಸತ್ಕರಿಸುವರು.

ತನ್ನ ಕಷ್ಟಗಳು ಕಳೆದರೂ ದುರ್ಗಳಿಗೆ ವೀರಭದ್ರನಮೇಲೆ ಕೊಂಚವಾದರೂ ಕೋಪವು ಕಡಿಮೆಯಾಗಲಿಲ್ಲ. ಅವಳು ತನ್ನ ಮಗನೊಂದಿಗೆ ಆಗಾಗ "ಮಗೂ, ನೀನು ಯಾವಾಗ ಬೆಳೆದು ದೊಡ್ಡವನಾಗಿ, ನಿನ್ನ ತಂದೆಯ ಹತ್ಯೆಗೆ





ಪ್ರತಿಕಾರ ಮಾಡುವಿಯೋ ಎಂದು ಎದುರು ನೋಡುತ್ತಿದ್ದೇನೆ. ಇಷ್ಟರಲ್ಲಿ ಆ ವೀರಭದ್ರನನ್ನು ದೇವರೇ ಎಲ್ಲಿ ಹೊತ್ತುಕೊಂಡು ಹೋಗುವನೋ ಎಂದು ನನಗೆ ಭಯವಾಗಿದೆ. ಹಾಗಾಗಬಾರದು. ಆ ದುಷ್ಟನಿಗೆ ನಿನ್ನ ಕೈಯಿಂದಲೇ ಸಾವು ಬರಬೇಕೇಹೊರತು ಅವನು ಬೇರೆ ರೀತಿಯಾಗಿ ಸತ್ತರೆ ನಾನು ಸಹಿಸಲಾರೆ" ಎಂದು ಹೇಳುವಳು.

ಸಿಂಹದತ್ತನು ತಾಯಿ ಹೇಳುವುದನ್ನು ಬಹುಶ್ರದ್ಧೆಯಿಂದ ಕೇಳುವನು. ಅವನು ಸಿಂಹವನ್ನು ನೋಡಲು ಅಡಿಗಡಿಗೆ ಸಿಂಹಗೃಹಕ್ಕೆ ಹೋಗುವನು. ಆಗಾಗ ಈ ಸಿಂಹವೂ ಸಹ ಅವನನ್ನು ಗುರುತಿಸಿದಂತೆ ನೋಡುವುದು. ಆಗ ಸಿಂಹದತ್ತನ ಆನಂದ ಹೇಳತೀರದು.

ಸಿಂಹದತ್ತನು ಬೆಳೆದು ದೊಡ್ಡವನಾದಂತೆ ವೀರಭದ್ರನು ತನ್ನ ಸಾವು ಅವನ ಕೈಯಿಂದಲೇ ಖಚಿತವೆಂದು ದೃಢಮಾಡಿಕೊಂಡನು. ಅವನಿಗೆ ಅದು ಸಹಜವೆನಿಸಿತು. ಈಗೀಗ ಅವನಿಗೆ ಸಾವಿನ ಭಯ ಸಹ ದೂರದೂರ ತೊಲಗಿತು.

ಸಿಂಹ ದಿನ ಕಳೆವಂತೆ ಮುದಿಯಾಯಿತು. ಅದು ಇಂದೋ ನಾಳೆಯೋ ಸಾಯುವುದೆಂದು ಜನರಾಡಿಕೊಳ್ಳುತ್ತಿದ್ದರು. ಸಿಂಹದತ್ತನು ರಾತ್ರಿ ಹಗಲು ಸಿಂಹಗೃಹದಲ್ಲಿಯೇ ಕುಳಿತು ಅದರ ಕಡೆಯೇ ನೋಡುತ್ತಿದ್ದನು. ಸಿಂಹ ಈಗ ಯಾರ ಕಡೆಯೂ ನೋಡುತ್ತಿರಲಿಲ್ಲ. ಸಾಯುವ ಮುಂಚೆ ಅದು ತನ್ನ ಕಡೆಯೊಂದುಬಾರಿ ನೋಡಿದರೆ ಸಾಕೆನಿಸಿತು ಸಿಂಹದತ್ತನಿಗೆ.

ಅವನ ಕೋರಿಕೆಯೂ ಸಹ ನೆರವೇರಿಬಿಟ್ಟಿತು. ಆ ಕೇಸರಿಯು ಸಾಯಲು ಕೆಲವೇ ಕ್ಷಣಗಳಿರುವಾಗ ಸಿಂಹದತ್ತನನ್ನು ತದೇಕ ದೃಷ್ಟಿಯಿಂದ ನೋಡಿತು. ಆ ನೋಟದಲ್ಲಿ ಸಿಂಹದತ್ತನಿಗೆ ಒಂದು ವಿಷಾದಭಾವ ಕಾಣಿಸಿತು. ಸಿಂಹ ಸತ್ತು ಎಷ್ಟೋ ದಿನಗಳಾದರೂ ಅವನಿಗೆ ಆ ಸಿಂಹದ ಕಟ್ಟಕಡೆಯ ನೋಟವನ್ನು ಮರೆಯಲಾಗಲಿಲ್ಲ.

ಕೊಂಚಕಾಲ ಕಳೆಯಿತು. ಒಂದು ದಿನ ಮಧ್ಯಾಹ್ನ ದುರ್ಗ ತನ್ನ ಮಗನನ್ನು ಕರೆದು, ಅವನ ಕೈಗೆ ಒಂದು ಬಾಕು ಕೊಟ್ಟು, "ಮಗೂ, ನಿನ್ನ ತಂದೆಯ ಕೊಲೆಗೆ ಪ್ರತಿ

ಕ್ರಿಯೆಮಾಡುವ ದಿನ ಬಂದಿತು. ವೀರಭದ್ರನು ಯಾವುದೋ ಕಾರ್ಯನಿಮಿತ್ತ ನೆರೆಯೂರಿಗೆ ಹೋಗಿದ್ದಾನೆ. ಸಂಜೆ ಹಿಂತಿರುಗುವನಂತೆ. ನೀನು ನಗರದಾಚೆಯಿರುವ ಅಡವಿಯಲ್ಲಿ ಹೊಂಚಿದ್ದು, ಆ ದುರುಳನನ್ನು ಕೊನೆಗಾಣಿಸಿ ಮನೆಗೆ ಬಾ" ಎಂದಳು.

"ಸರಿಯಮ್ಮಾ" ಎಂದು ಸಿಂಹದತ್ತನು ತನ್ನ ತಾಯಿಯ ಕೈಯಿಂದ ಬಾಕನ್ನು ತೆಗೆದುಕೊಂಡನು. ಸಾಯಂಕಾಲದ ಹೊತ್ತಿಗೆ ಅವನು ಅಡವಿಗೆ ಹೋಗಿ ವೀರಭದ್ರನಿಗಾಗಿ ಕಾಯುತ್ತಿದ್ದನು. ಸಂಜೆಯಾಗುವ ವೇಳೆಗೆ ಒಬ್ಬೊಂಟಿಗನಾಗಿ ವೀರಭದ್ರನು ಅತ್ತ ಬಂದನು. ಸಿಂಹದತ್ತನು ಮರೆದಮರೆಯಿಂದ ಹೊರಗೆ ಬಂದು ವೀರಭದ್ರನ ಮೇಲೆಬಿದ್ದು, ಅವನನ್ನು ಕೆಳಕ್ಕೆ ಕೆಡವಿ, ಅವನ ಎದೆಯ ಮೇಲೆ ಹಾರಿ, ಕಠಾರಿಯನ್ನು ಮೇಲಕ್ಕೆತ್ತಿದನು. ವೀರಭದ್ರನು ವೃದ್ಧನಾಗಿದ್ದನು. ಸಿಂಹದತ್ತನು ಧಷ್ಟಪುಷ್ಟನಾದ ಪ್ರಾಯದ ತರುಣ. ವೀರಭದ್ರನು ಹೋರಾಡಿದರೂ ಅಪಾಯದಿಂದ ತಪ್ಪಿಸಿಕೊಳ್ಳುವ ಆಶೆ ಇರಲಿಲ್ಲ. ಸಾಯಲು ಸಿದ್ಧನಾಗಿದ್ದ ವೀರಭದ್ರನು ಒಮ್ಮೆ ಸಿಂಹದತ್ತನನ್ನು ದೃಷ್ಟಿಸಿ ನೋಡಿದನು.

ಮರುಕ್ಷಣವೇ ಸಿಂಹದತ್ತನು ಮೇಲಕ್ಕೆತ್ತಿದ್ದ ಕಠಾರಿ ಹಾಗೇ ನಿಂತುಬಿಟ್ಟಿತು. ಯಾಕೆಂದರೆ ಅವನಿಗೆ ವೀರಭದ್ರನ ಕಣ್ಣುಗಳನ್ನು ಕಂಡ ಕೂಡಲೇ ಸಾಯುವಾಗ ಸಿಂಹವು ತನ್ನ ಕಡೆ ನೋಡಿದ ನೋಟ ಜ್ಞಾಪಕಕ್ಕೆ ಬಂದಿತು. ಆ ನೋಟದಲ್ಲಿ ಭೀತಿ ಕಾಣಿಸಲಿಲ್ಲ. ಆದರೆ



ಯಾವುದೋ ಒಂದು ವಿಚಿತ್ರವಾದ ವಿಷಾದ ಭಾವ ಕಾಣಿಸಿತು. ಸಿಂಹದತ್ತನು ಕಠಾರಿಯನ್ನು ಎಸೆದು, ಅಲ್ಲಿಂದೆದ್ದು ನೆಟ್ಟಗೆ ಅಡವಿಯನ್ನು ಪ್ರವೇಶಿಸಿದನು. ಅವನನ್ನು ಯಾರೂ ಅಂದಿನಿಂದ ಕಂಡವರಿಲ್ಲ.

ಬೇತಾಳ ಈ ಕಥೆ ಹೇಳಿ "ರಾಜನೇ, ನನ್ನನ್ನು ಒಂದು ಸಂದೇಹ ಪೀಡಿಸುತ್ತಿದೆ. ಸಿಂಹದತ್ತನು ತನ್ನ ತಾಯಿ ಕೋರಿದ ಪ್ರಕಾರ ವೀರಭದ್ರನನ್ನು ಕೊಂದು ತಂದೆಯ ಕೊಲೆಗೆ ಪ್ರತಿಕ್ರಿಯೆ ಯಾಕೆ ಮಾಡಲಿಲ್ಲ? ಈ ಪ್ರಶ್ನೆಗೆ ಸಮಾಧಾನ ತಿಳಿದೂಸಹ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು" ಎಂದಿತು.

ತ್ರಿವಿಕ್ರಮನು ಹೀಗೆ ಸಮಾಧಾನ ಹೇಳಿದ. ಸೇಡಿನ ಹಿಂದೆಯೇ ಪ್ರತಿಕ್ರಿಯೆ ಇರುವುದು. ಈ ಸಂದರ್ಭದಲ್ಲಿ ಸೇಡು ದುರ್ಗಳದು. ಸಿಂಹದತ್ತನದಲ್ಲ. ತನ್ನ ತಾಯಿಯ ಸೇಡು ತೀರಿಸಲು ಅವನು ವೀರಭದ್ರನನ್ನು ಕೊಲ್ಲಲು ಒಪ್ಪಿಕೊಂಡನು. ಆದರೆ ಹಾಗೆ ಪ್ರತಿಕ್ರಿಯೆ ಮಾಡುವ ಸಮಯದಲ್ಲಿ ಸಿಂಹದತ್ತನಿಗೆ ಮತ್ತೊಂದು ವಿಷಯ ಜ್ಞಾಪಕಕ್ಕೆಬಂತು. ಅವನ ಬುದ್ಧಿಗೆ ಸಿಂಹ ಮತ್ತು ವೀರಭದ್ರರು ಒಂದೇ ರೀತಿ ತೋರಿದರು. ಇಬ್ಬರೂ ಕ್ರೂರ ಸ್ವಾಭಾವದವರು. ಇಬ್ಬರೂ ಪ್ರಾಣಹಾನಿ ಮಾಡಿದವರೇ! ಆದರೆ ವೀರಭದ್ರನಂತೆ ಜನಹಾನಿ ಸ್ವಭಾವ ಹೊಂದಿದ್ದರೂಸಹ ಸಿಂಹ ತನ್ನನ್ನು ಕೊಲ್ಲದೆ ಕಾಪಾಡಿ, ತನ್ನ ತಂದೆಯ ನಂತರ ಎರಡನೆಯ ಪಿತನಂತಾಯಿತು. ಜನರು ತನಗೆ ಅದರ ಹೆಸರಿನ್ನಿಟ್ಟರು. ಆ ಮುದಿಸಿಂಹವು ತನಗೆ ಸಿಕ್ಕಿದ್ದರೆ ಅದನ್ನು ಅವನು ಕೊಲ್ಲಲಾರ. ಅಂತಹ ಪರಿಸ್ಥಿತಿಯಲ್ಲೇ ಈಗ ವೀರಭದ್ರನು ಸಿಕ್ಕಿದ್ದಾನೆ. ತನ್ನ ತಂದೆಯನ್ನು ಕೊಲೆಮಾಡಿದ್ದರೂ, ಆ ವಯೋವೃದ್ಧನನ್ನು ಕೊಲ್ಲಲು ತನಗೆ ಉಚಿತ ಕಾರಣವಿಲ್ಲವೆಂದು ಸಿಂಹದತ್ತನಿಗೆ ತೋರಿತು. ಅವನು ತನ್ನ ತಾಯಿಯ ಸೇಡನ್ನು ತನ್ನ ಸೇಡನ್ನಾಗಿ ಮಾಡಿಕೊಳ್ಳಲು ಅಸಮರ್ಥನಾದುದರಿಂದಲೇ ದೇಶಾಂತರ ಹೊರಟುಹೋದನು."

ರಾಜನಿಗೆ ಈ ರೀತಿ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯವಾಗಿ ಮರವೇರಿತು.





# ಕಾಗೆ ಗೂಗೆಗಳು

“ ಹಿಂದೆ ನಾನು ವಾಸಿಸಿಕೊಂಡಿದ್ದಾ
ಮರದ ಪೊಟರೆಯೊಳಗೆ
ಒಂದು ಗುಬ್ಬಿಯೂ ವಾಸಿಸಿಕೊಂಡಿತು
ಸ್ನೇಹವಾಯಿತೆನಗೆ

ನಾವುಗಳೀರ್ವರು ಬಿಡುವಿಲಿ ಕೂಡುತೆ
ಹರಟೆ ಹೊಡೆವೆವೆನಿತೋ;
ಒಂದಿನ ಗುಬ್ಬಿಯನೆಲ್ಲೂ ಕಾಣದೆ
ತಳಮಳಿಸಿದೆನೆನಿತೋ.

ಹೋದ ಗುಬ್ಬಿ ಕೆಲದಿನಕೂ ಬರದಿರೆ
ಚಿಂತಿಸುತಿರೆ ನಾನು,
ಒಂದು ಮೊಲವು ಆ ಪೊಟರೆಗೆ ನುಸುಳಿತು;
ತಳವೂರಿತು ತಾನು.

ಯಾರು ಬಂದರೇನೆಂದಿರೆ ನಾನ್, ಕೆಲ
ದಿನಕೆ ಬಹಳ ಕೊಬ್ಬಿ,
ಹಾರಿಬಂದು ಆ ಗುಬ್ಬಿ, ಮೊಲವ ಕಾ
ಣುತೆ ಕೋಪದಿ ಉಬ್ಬಿ,

ತನ್ನ ಕೋಟರವ ಬಿಟ್ಟು ನಡೆಯೆಂದು
ಬೈಯಲು ಘಾಟಾಗಿ,
‘ ಒಮ್ಮೆ ಬಿಟ್ಟ ಮನೆ ನಿನ್ನದಾಗುವುದೆ ?
ತೊಲಗೋ ನೀಟಾಗಿ !

ಹಿಂದೆ ಹತ್ತು ವರುಷಗಳಾನಿದ್ದೆನು
ಎನ್ನ ಮನೆಯಿದೇ ನ್ಯಾಯ ’
ಎಂದ ಮೊಲಕೆ ಆ ಗುಬ್ಬಿಯೆಂದಿ ‘ ತಲೊ
ಕೇಳುವೆಯಾ ಬಾ ನ್ಯಾಯ !

ನ್ಯಾಯ ಬಲ್ಲವರ ಮುಂದೆ ಈ ವಿವರ
ವಿಟ್ಟು ಕೇಳೋಣ ನ್ಯಾಯ ’
ಸರಿಯೆಂದೊಪ್ಪಲು ಹೊರಟುವವೆರಡೂ,
ಹೇಗಾಗುವುದೋ ನ್ಯಾಯ ?

ತಿಳಿಯಲು ನಾನೂ ಪೋದೆ ಹಿಂದೆಯೇ
ದಾರಿಯಲಿದ್ದಿತು ಮಾರ್ಜಾಲ !
ಅದು ಮುನಿಯಂತಿರ್ಕಾಲಲಿ ನಿಂತೇ
ತಪಸ್ಸಿಲಿತ್ತೇನೋ ಜಾಲ !

ಮಾರಂಗ



ಎರಡೂ ತಮ್ಮಯ ಹಾಲಹವಾಲೆಯ
ಆ ಮುನಿಯ ಮುಂದೆ ಪೇಳಿದುವು.
ಹತ್ತಿರ ಪೋಗಲು ಹೆದರಿ ದೂರದಲಿ
ನಿಂತೇ ನ್ಯಾಯವ ಕೇಳಿದುವು.

ಬೆಕ್ಕೆಂದಿತು: 'ಹರಿ! ಹರಿ! ನಾನ್ ಮಾಂಸವ
ನುಳಿದು ನಿರಶನವ್ರತ ಪಿಡಿದೆ!
ಶಕ್ತಿಯೆ ಕುಂದಿದೆ, ಕಿವಿಯೇ ಕೇಳದು
ಕಿವಿಯಲಿ ಪೇಳಿರಿ ಕೈಪಿಡಿದೇ'

ಹೀಗಾ ಮುನಿಮಾರ್ಜಾಲವು ಪೇಳಿದ
ಶಾಂತದ ಮೃದುನುಡಿ ಕೇಳ್ದೊಡನೆ,
ಮೊದ್ದುಗಳಾ ಮೊಲ ಗುಬ್ಬಿಗಳೆರಡೂ
ನಂಬಿಯುದರ ಬಳಿ ಸಾರ್ದೊಡನೆ,

ಶಾಂತಮೂರ್ತಿ ಮುನಿ ಗಬಕ್ಕನೊಂದರ
ತಲೆಯನೊತ್ತಿ ಬಿಗಿಹಿಡಿದು,
ಅದೇ ವೇಳೆಗೇ ಇನ್ನೊಂದನು ಪಿಡಿ
ದೆತ್ತಿ ತಿಂತು ಕಟಕಟ ಕಡಿದು!

ಸಾಧುಪ್ರಾಣಿ ಮೊಲ ಗುಬ್ಬಿಗಳೆರಡೂ
ಕ್ಷುಲ್ಲಕನನು ಬಲ್ಲಿದನೆಂದು,
ನಂಬಿಯಾತನಾ ಉದರದ ಒಳಗೇ
ಬಲಿಯಾದರು ನಿಮಿಷದೊಳೆಂದು!

ಈ ಕತೆ ಕೇಳುತ ಪಕ್ಷಿಗಳನಿತೂ
ಚದುರಿದುವಿದು ಸೈಸೈಯೆನುತ.
ಘೂಕವು ಸಿಡುಕಿತು; ತನಗೆ ಕಿರೀಟವ
ಕಾಗೆಯೆ ತಪ್ಪಿಸಿತೆಂದೆನುತ.

'ಓ! ಕಾಗೇ ತಾಳ್! ನಿನಗೂ ಎನಗೂ
ಆಯ್ತಿಂದಿಂದೇ ಹಗೆನಂಟು!
ನಿನ್ನ ವಂಶ ನಿರ್ಮೂಲವ ಮಾಳ್ಪೆನು!
ಹಾಕಿಕೊ ಸೆರಗಿಗೆ ಗಂಟು!'

ಎಂದಿತುಲೂಕವು ಕಾಗೆಯ ನೋಡುತೆ.
ಅಂದಿಂದಾಯ್ತಾ ವೈರ."
ಕಾಕರಾಜನಂದಿತು: "ಹೇಗಾದರು
ತೀರಿಸಬೇಕೀ ವೈರ."

ಮಂತ್ರಿ ಮೇಘವರ್ಣವು ಪೇಳಿತು, "ನಿಜ,
ತಪ್ಪದು ವೈರಿಯ ಹನನ!
ಕೇಳಿರೋರ್ವ ವಿಪ್ರನು ಆಡೊಂದನು
ಕೊಂಡನು ಮಾಡಲು ಯಜನ.

ಹೊತ್ತು ಅಜವ ನಡೆಯುತ್ತಿರೆ, ಮೂವರು
ಠಕ್ಕರೊಳಗೋರ್ವ ಠಕ್ಕ,
ಠಕ್ಕಿಸೆ ವಿಪ್ರನ ಮುಂದೆ ಬಂದು 'ಅರ
ರೇರೆ!' ಎನ್ನುತೆ ನಕ್ಕ!

'ನಾಯಿಯ ಹೊರುವಿರಲಾ!' ಎನೆ, ಹಾರುವ
'ಕುರುಡು ನಾಯಿ ನೀನೆ'ಂದ.
ಎನಗೇನೆನುತಾ ಠಕ್ಕನು ಜಾರಲು,
ಮುಂದೆರಡನೆಯವ ಬಂದ.

ಅವನೂ ಕೇಳಿದ 'ಸ್ವಾಮಿ, ನಾಯಿಯ
ನೇಕೆ ಹೊರುವಿರೋ?' ಎಂದು.
ಬ್ರಾಹ್ಮಣ ಕೋಪಿಸಿ ಮುಂದಕೆ ನಡೆಯಲು
ಮೂರನೆ ಠಕ್ಕನು ಬಂದು,

'ಅಯ್ಯೋ! ನಾಯಿಯ ಹೊರುವುದೆ ಬ್ರಾಹ್ಮಣ!
ಏನು ಬಂತೊ ಪಾಪಾ!'
ಎನುತ ನಗುತೆ ಸಾರಿದನಾಗಾಗಳೆ
ವಿಪ್ರಗೆ ಬಡೆಯಿತು ಧೂಪ!

'ಇಸ್ಸೀ! ಇದು ನಾಯೇ? ಹಾ!' ಎನ್ನುತ
ಕೆಳಗೆಸೆದಲ್ಲೇ ಅಜವ
ಏನೂ ತೋರದೆ ಓಡಲು ಬ್ರಾಹ್ಮಣ
ಠಕ್ಕರೊಯ್ದರಾ ಅಜವ!

ಇದರಿಂದಲ್ಪರು ಅಧಿಕರೆನಿಸಿದರೆ
ಇದಿರಾಳಿಗೆ ಕೇಡುಂಟು."
ಆಗೆಂದಿತು ಸ್ಥಿರಜೀವಿ: "ಹೌದಿದಕೆ
ಹಾವಿನ ಕತೆಯೊಂದುಂಟು.



ಹಾವದು ತನ್ನಯ ಬಿಲಕೆ ನುಸುಳುತಿರೆ
ಮುಳ್ಳು ಚುಚ್ಚಿ ಗಾಯಾಯ್ತು.
ಗಾಯಕೆ ಬಂದಿತು ಇರುವೆಗಳಾ ಪಡೆ
ಹಾವಿಗೆ ಪೇಚಾಟಾಯ್ತು.

ಕೊನೆಗಿರುವೆಗಳಾ ಹಾವನೆ ಕೊಂದುವು!
ಅಲ್ಪರಾದರೇನ್? ಗುಂಪಾಗಿ
ಮಹಾವೈರಿಯನು ಮಣ್ ಮುಕ್ಕಿಸುವುದು
ಕಷ್ಟವಲ್ಲ ಒಗ್ಗಟ್ಟಾಗಿ!

ಒಂದು ಉಪಾಯವ ಪೇಳುವೆ ಕೇಳಿರಿ,
ಎನ್ನನು ನೀವನಿಬರು ಸೇರಿ
ಮುತ್ತಿ ರೆಕ್ಕೆಗಳ ಸಡಲಿಸಿ ಮರದಡಿ
ಹಾಕಿರಿ ಬಯ್ಯುತೆ ಬಲು ದೂರಿ.



ಕತ್ತಲೆಯಲಿ ಕಾಗೆಗಳನು ಕೊಲ್ಲಲು
ಗೂಗರಸನು ಮೆಲ್ಲನೆ ಬಂದ.
ಕಾಗೆಗಳೊಂದನು ಕಾಣದೆ ಸುತ್ತೂ
ಅರಸುತ ಯೋಚಿಸುತಲೆ ನಿಂದ.

ನರಳಿಕೊಂಡು ಸ್ಥಿರಜೀವಿ ತೆವಳುತಾ
ಘೂಕರಾಜನಾ ಬಳಿ ಸಾರಿ
ಕಾಕಮಂತ್ರಿಯಾದೆನಗಿಂತಾಯಿತು
ಅಕಟೆಂದಿತು ಕಂಬನಿದೋರಿ.

ಏನೇಕೆಂದಾ ಘೂಕವು ಕೇಳಿತು;
ಸ್ಥಿರಜೀವಿ ನುಡಿಯಿತಿಂತು :
"ಘೂಕರಾಜನೇ! ಏನ್ನೆನಲಿ! ಹಾ!
ಹಿತನುಡಿ ಅಹಿತಾಯ್ತೆನಗಿಂತು.

ಗೂಗೆಗಳೊಂದಿಗೆ ಹಗೆ ಬೇಡೆನ್ನುತ
ಅರಸಗೆ ಹಿತನುಡಿ ಪೇಳಿದೆನು.
ಗೂಗೆಯ ಗೆಳೆಯನು ನಾನೆಂದೆಣಿಸಿಯೆ
ಬಡೆಸಿದನ್ನೆ! ಸಾಯ್ವಂತಿಹೆನು.

ಇಂತು ಹಿಂಸಿಸಿದ ಎನ್ನವರನು ನಾನ್
ಸೇಡು ತೀರಿಸದೆ ಬಿಡೆನು!
ನಿಮ್ಮಾರೈಕೆಲಿ ಗುಣಮುಖನಾದರೆ
ಪಂಥ ಗೆಲ್ವನುಡಿ ಪೇಳುವೆನು!"

ಘೂಕರಾಜ ನಿಜಮಂತ್ರಿಗಳನು ಕಂ
ಡೆಂದನು 'ಕಾಗೆಯಿದರ ಗತಿಯು,
ಕಂಡೆವಲಾ, ಯೋಚಿಸಿ ಪೇಳಿರಿ ನಾವ್
ಕೈಕೊಳ್ಳಲು ಮುಂಗತಿಯು.'

ಬಡೆದು ತಿವಿದು ಬಳಿಕೆನ್ನನು ಬಿಟ್ಟೀ
ಹೋಗಿರಿ ಬೆಟ್ಟಕೆ ನೀವೆಲ್ಲಾ.
ನಾನಿಲ್ಲಿದ್ದೇ ನೋಳ್ಪೆನು ಮುಂದಿನ
ವೈರಿಯ ಕೊಲ್ಲುವ ಪರಿಯೆಲ್ಲಾ"

ಹೀಗೆ ಸ್ಥಿರಜೀವಿ ಪೇಳಲು ಕಾಗೆಗ
ಳರಸನು ಕಾಗೆಗಳೊಡಗೂಡಿ,
ಕೆಡವಿ ಬಡೆದು ಬಿರುಸಾಗಿ ಬೈದದಂ
ಬಿಟ್ಟು ಸೇರಿತಾ ಗಿರಿಗೋಡಿ.

ಎಲ್ಲರೊಂದಿಗದು ಗಿರಿಮೇಲಿರುತಿರೆ,
ಇಲ್ಲಿ ಸ್ಥಿರಜೀವಿ ಬಿದ್ದಿತ್ತು.
ಕರ್ರೆನುತಾರ್ತದಿ ನೆರಳುತ್ತಿರಲದು
ಕತ್ತಲೆ ಕವಿಯುತೆ ಬರುತಿತ್ತು.




## 3

[ಕೀಲುಕುದುರೆಯಮೇಲೆ ಕುಳಿತು ಆಕಾಶಕ್ಕೆ ಹಾರಿದ ರಾಜಕುಮಾರ ಅಕ್ಮಾರ್ ಆ ಕುದುರೆಯನ್ನು ಸ್ವಾಧೀನಪಡಿಸಿಕೊಳ್ಳ ತಕ್ಕ ರಹಸ್ಯಗಳನ್ನು ತಿಳಿದುಕೊಂಡನು. ಅವನು ಆ ಕುದುರೆಯೊಂದಿಗೆ ಒಂದು ದೇಶದ ಅರಮನೆಯಮೇಲೆ ಇಳಿದು ಅರ್ಧರಾತ್ರಿ ಹೊತ್ತಿನಲ್ಲಿ ಅಂತಪುರದಲ್ಲಿ ಪ್ರವೇಶಿಸಿ ಅತಿ ಸೌಂದರ್ಯವತಿಯಾದ ರಾಜಕುಮಾರಿ ಷಮ್ಸ್ ಅಲ್ ನಹರ್‌ಳನ್ನು ಕಂಡು, ಪ್ರೇಮಿಸಿದನು. ಇಷ್ಟರಲ್ಲಿ ಆಕೆಯ ತಂದೆ ಅಲ್ಲಿಗೆ ಬಂದು ಅವನನ್ನು ಕಂಡು, ತನ್ನ ಗೌರವಕ್ಕೆ ಕುಂದುಂಟಾಗುವುದೆಂಬ ಉದ್ದೇಶದಿಂದ ಅವರಿಬ್ಬರಿಗೂ ರಹಸ್ಯವಾಗಿ ವಿವಾಹ ಮಾಡುವೆನೆಂದನು. ರಾಜನ ಬಳಿಯಿದ್ದ ಎಂಬತ್ತುಸಾವಿರ ಆಯುಧ ಭಟರೊಂದಿಗೆ ತಾನೊಬ್ಬನೇ ಯುದ್ಧಮಾಡಲು ಅವಕಾಶ ಕೊಟ್ಟಲ್ಲಿ ತಾನು ವಿವಾಹ ಮಾಡಿಕೊಳ್ಳುವೆನೆಂದು ಹೇಳಿದನು ಅಕ್ಮಾರ್. ಮರುದಿನ ಯಾವತ್ತೂ ಸೈನ್ಯ ಮೈದಾನದಲ್ಲಿತ್ತು. "ನನ್ನ ಕುದುರೆ ರಾಜಭವನದಮೇಲಿರುವುದು. ತರಿಸಿಕೊಡಿ" ಎಂದ ಅಕ್ಮಾರ್. ಅದನ್ನು ತರಲು ರಾಜನು ತನ್ನ ಸೇನಾನಾಯಕನನ್ನು ಕಳುಹಿಸಿದನು.]

ಸೇನಾನಾಯಕನು ಉಪ್ಪರಿಗೆಮೇಲೆ ಹೋಗಿ ನೋಡಲು ಅಲ್ಲೊಂದು ಸುಂದರವಾದ ಕುದುರೆ ಕಾಣಿಸಿತು. ಸಮಿಾಪಿಸಿ ನೋಡಲು ಅದೊಂದು ಗಂಧದ ಮರದಿಂದ ಮತ್ತು ದಂತದಿಂದ ಮಾಡಿದ ಅಶ್ವವಾಗಿತ್ತು. ಆತನೂ, ಆತನೊಂದಿಗೆ ಬಂದಿದ್ದ ಭಟರೂ ಗೊಳ್ಳನೆ ನಕ್ಕರು.

"ಈ ಕುದುರೆಯೊಂದಿಗೆ ಅವನು ಯುದ್ಧ ಮಾಡುವನೇ? ಅವನೆಲ್ಲೋ ಹುಚ್ಚ" ಎಂದು

ಸುನಂದಾದೇವಿ



ನಗೆಯಾಡಿದ ಒಬ್ಬ. "ಇದರಲ್ಲೇನೋ ಇಂದ್ರ ಜಾಲವಿರಬೇಕು, ಯಾರು ಕಂಡರು" ಎಂದ ಮತ್ತೊಬ್ಬ.

ಭಟರು ಕುದುರೆಯನ್ನು ಎತ್ತಿಕೊಂಡು ಬಂದು ರಾಜನ ಮುಂದಿಟ್ಟರು. ಜನರು ಆ ಅಶ್ವದ ಸುತ್ತಲೂ ನೆರೆದು ವಿಸ್ಮಯದಿಂದ ನೋಡುತ್ತಿದ್ದರು. ರಾಜನು ಆಶ್ಚರ್ಯದಿಂದ ಅಕ್ಮಾರನಕಡೆ ತಿರುಗಿ "ಇದೇಯೇ ನಿನ್ನ ಕುದುರೆ?" ಎಂದು ಕೇಳಿದನು. ಅಕ್ಮಾರನು ಹೌದೆಂದನು. "ಹಾಗಾದರೆ ಯುದ್ಧಕ್ಕೆ ಹೊರಡ ಬಹುದಲ್ಲಾ" ಎಂದ ರಾಜ.

"ಈ ಜನರು ದೂರ ಸರಿಯಲಿ. ನಂತರ ಇದರ ಮೇಲೇರಿ ನಿಮ್ಮ ಸೈನ್ಯವನ್ನೆಲ್ಲಾ ಧ್ವಂಸ ಮಾಡುವೆನು" ಎಂದ ಅಕ್ಮಾರ್.



"ನೀನು ಅವರನ್ನು ಕೊಲ್ಲಲು ಸಂಕೋಚ ಪಡಬೇಡ. ಯಾಕೆಂದರೆ ಅವರು ನಿನ್ನನ್ನು ಕೊಲ್ಲಲು ತವಕದಿಂದಿದ್ದಾರೆ" ಎಂದ ರಾಜ.

ಜನರು ದೂರಸರಿದಕೂಡಲೇ ಅಕ್ಮಾರ್ ಕುದುರೆಯಮೇಲೆ ಕುಳಿತು, ಸನ್ನೆಯನ್ನು ಒತ್ತಿದನು. ಎಲ್ಲರೂ ನೋಡುತ್ತಿರುವಂತೆಯೇ ಕುದುರೆ ಆಕಾಶಕ್ಕೆ ಹಾರಿತು.

"ಅವನನ್ನು ಹಿಡಿಯಿರಿ, ಹಿಡಿಯಿರಿ" ಎಂದು ರಾಜನು ಕೂಗಿಕೊಂಡನು. ಆದರೆ ಮೇಲೆ ಹಾರಿಹೋಗುತ್ತಿದ್ದವನನ್ನು ಹಿಡಿಯಲು ಯಾರಿಗೆತಾನೇ ಸಾಧ್ಯ!

"ಮಹಾಪ್ರಭೂ, ಅವನು ಮಾನವನಲ್ಲ. ದೆವ್ವವೋ, ಭೂತವೋ, ಮಾಯಾವಿಯೋ ಆಗಿರಬೇಕು. ಅಂತಲೇ ನಮ್ಮ ಕಣ್ಣಿಗೆ ಧೂಳೆರಚಿ ತಪ್ಪಿಸಿಕೊಂಡನು" ಎಂದರು, ಅಲ್ಲಿ ನೆರೆದಿದ್ದ ಅಧಿಕಾರಿಗಳು.

ಅವನ ಪೀಡೆ ತೊಲಗಿತೆಂದು ರಾಜನು ಹರ್ಷಿತನಾದನು. ಆತನು ತನ್ನ ಅರಮನೆಗೆ ಹಿಂತಿರುಗಿ, ತನ್ನ ಮಗಳೊಂದಿಗೆ ಮೈದಾನ ದಲ್ಲಿ ನಡೆದ ವಿಷಯವನ್ನೆಲ್ಲಾ ಬಣ್ಣಿಸಿ ಹೇಳಿ ದನು. ಆ ಸುದ್ದಿ ಕೇಳಿ ತನ್ನ ಮಗಳು ಸಂತೋಷಪಡಬಹುದೆಂದು ರಾಜನು ಭಾವಿ ಸಿದ್ದನು. ಆದರೆ ಆಕೆ ಸಂತೋಷಪಡುವ ಬದಲು ಶೋಕಿಸಲು ಆರಂಭಿಸಿದಳು. ರಾಜ ನಿಗೆ ಅಮಿತಾಶ್ಚರ್ಯವಾಯಿತು.

"ಮಗೂ, ಅವನೊಬ್ಬ ಕಳ್ಳ, ಸುಳ್ಳ, ದುರುಳ, ಪಾಪಿ, ಮಾಯಾವಿ, ಪಟಿಂಗ. ಅವನ

ಪೀಡೆ ಕಳೆಯಿತೆಂದು ಅಲ್ಲಾಗೆ ಕೃತಜ್ಞತೆಯನ್ನು ಸೂಚಿಸಬೇಕೇಹೊರತು ಅಳುವುದುಂಟೇ?" ಎಂದ ರಾಜ.

ರಾಜನು ಸಮಾಧಾನ ಹೇಳಿದಷ್ಟೂ ರಾಜಕುಮಾರಿಯ ದುಃಖ ಹೆಚ್ಚಿತೇಹೊರತು ಕಡಿಮೆಯಾಗಲಿಲ್ಲ. "ಅವರು ಮತ್ತೆ ಕಾಣಿಸುವವರೆಗೆ ನಾನು ಅನ್ನಾಹಾರಗಳನ್ನು ಮುಟ್ಟಲಾರೆ. ಅಂದಿತನಕ ಅಳುತ್ತಲೇ ಇರುತ್ತೇನೆ." ಎಂದು ತಂದೆಗೆ ತಿಳಿಸಿದಳಾಕೆ. ರಾಜನು ಹತಾಶನಾದನು.

ಈತನ್ಮಧ್ಯೆ ರಾಜಕುಮಾರ ಅಕ್ಮಾರ್ ತಾನು ಆಗತಾನೇ ತ್ಯಜಿಸಿದ ನಗರದ ಹೆಸರು 'ಸನಾ' ಎಂತಲೂ, ಯಮನ್‌ದೇಶಕ್ಕೆ ಅದು ಮುಖ್ಯಪಟ್ಟಣವೆಂತಲೂ ತಿಳಿದುಕೊಂಡನು. ಅವನು ತನ್ನ ಕೀಲುಕುದುರೆಯನ್ನು ಸ್ವದೇಶಕ್ಕೆ ತಿರುಗಿಸಿ, ಸುಗಮವಾಗಿ ಪ್ರಯಾಣ ಮಾಡುತ್ತ, ಕತ್ತಲಾದನಂತರ ತನ್ನ ತಂದೆಯ ಭವನದ ಉಪ್ಪರಿಗೆಯಮೇಲೆ ಇಳಿದನು.

ಅಕ್ಮಾರ್ ಹೊರಟುಹೋದಂದಿನಿಂದ ಸಾಬೂರ್ ಚಕ್ರವರ್ತಿ ಮತ್ತು ಆತನ ಕುಟುಂಬ ಚಿಂತಾಸಾಗರದಲ್ಲಿ ಮುಳುಗಿದ್ದರು. ಚಕ್ರವರ್ತಿ ಮೆಟ್ಟಿಲು ಇಳಿದು ಬರುತ್ತಿದ್ದ ಮಗನನ್ನು ಕಂಡು ತನಗೇನು ಭ್ರಮೆಯೋ ಎಂದುಕೊಂಡನು. ಮರುಕ್ಷಣವೇ ತನ್ನ ಮಗನನ್ನು ಆಲಿಂಗಿಸಿಕೊಂಡು ಆನಂದಾಶ್ರುಗಳನ್ನು ಸುರಿಸಿದನು. ಅಕ್ಮಾರ್‌ನನ್ನು ಕಂಡು ಅವನ ಮೂವರು ಸಹೋದರಿಯರೂ ಹೃದಯವು



ತುಂಬಿಬಂದ ಆನಂದಭಾಷ್ಪಗಳನ್ನು ಸುರಿಸಿದರು. ಅಕ್ಮಾರ್‌ನು ಅವರಿಗೆ ತನ್ನ ಅನುಭವಗಳನ್ನೆಲ್ಲಾ ತಿಳಿಸಿದನು. ಚಕ್ರವರ್ತಿ ತನ್ನ ಭಟರೊಂದಿಗೆ "ನಾಳೆ ನಗರವನ್ನೆಲ್ಲಾ ಸಿಂಗರಿಸಿ, ಉತ್ಸವಗಳು ನಡೆಯುವಂತೆ ಏರ್ಪಾಡಾಗಬೇಕು. ಒಂದುವಾರದ ತನಕ ನಗರದಲ್ಲಿ ಸತ್ಕಾರಕೂಟಗಳು, ವಿನೋದಗಳು ನಡೆಯುತ್ತಿರಲಿ" ಎಂದು ಹೇಳಿದನು. ಮಾರನೇಯ ದಿನ ಸೆರೆಮನೆಯಲ್ಲಿದ್ದ ಖೈದಿಗಳನ್ನೆಲ್ಲಾ ಬಿಡುಗಡೆಮಾಡಲಾಯಿತು. ರಾಜನ ಸ್ವಂತ ಖರ್ಚಿನಿಂದ ಎಲ್ಲರಿಗೂ ಭಾರಿ ಔತಣ ನಡೆಯಿತು. ರಾಜಕುಮಾರನು ಹಿಂತಿರುಗಿ ಬಂದಿರುವ ವಿಷಯ ಎಲ್ಲರಿಗೂ ತಿಳಿಯಲು ಭಾರಿ ಮೆರವಣಿಗೆ ನಡೆಯಿತು. ಮೆರವಣಿಗೆ ಮುಗಿದ

ನಂತರ ಅಕ್ಬಾರ್ ತನ್ನ ತಂದೆಯೊಂದಿಗೆ "ಅಪ್ಪಾ, ಕೀಲುಕುದುರೆಯನ್ನು ಕೊಟ್ಟ ಸಿದ್ಧನು ಎಲ್ಲಿ?" ಎಂದು ಕೇಳಿದನು.

"ಅವನು ಸೆರೆಮನೆಯಲ್ಲಿದ್ದಾನೆ. ಅಲ್ಲಿಯೇ ಇರಲಿ. ಅಲ್ಲಾ ಅವನಿಗೆ ಕನಿಕರತೋರದಿರಲಿ. ಎಲ್ಲ ಕೈದಿಗಳನ್ನು ಬಿಡುಗಡೆಮಾಡಿದರೂ ಆ ದುರಾತ್ಮನನ್ನು ಬಿಡಲಿಲ್ಲ!" ಎಂದ ಚಕ್ರವರ್ತಿ.

ಅಕ್ಬಾರ್ ಆ ಸಿದ್ಧನನ್ನೂ ಬಿಡುಗಡೆಮಾಡ ಬೇಕೆಂದು ತಂದೆಯನ್ನು ಕೋರಿದನು. ಮಗನ ಮಾತಿಗೆ ಪ್ರತಿಹೇಳಲಾರದೆ, ಆ ಸಿದ್ಧನನ್ನು ಬಂಧನದಿಂದ ಬಿಡುಗಡೆಮಾಡಿಸಿದನು. ತನಗೆ ಇಷ್ಟವಿಲ್ಲದಿದ್ದರೂ ಅವನಿಗೆ ಶಾಲುಹೊದಿಸಿ, ಧನಕನಕಾದಿಗಳನ್ನು ಕೊಟ್ಟು ಗೌರವಿಸಿದನು. ರಾಜಕುಮಾರಿಯನ್ನು ಆ ಮುದುಕನಿಗೆ ಕೊಟ್ಟು ವಿವಾಹಮಾಡುವ ವಿಷಯವನ್ನು ರಾಜನು ಪ್ರಸ್ತಾಪಿಸಲಿಲ್ಲ. ಇಂಗಿತ ಜ್ಞಾನಿಯಾದ ಸಿದ್ಧನೂ ಸಹ ಸುಮ್ಮನಿದ್ದನು. ಆದರೆ ಸಿದ್ಧನು ಮತ್ತೆ ಒಳಗೊಳಗೆ ಕುದಿಯುತ್ತಿದ್ದನು. ತನ್ನ ಕೀಲುಕುದುರೆಯನ್ನು ರಾಜಕುಮಾರನ ವಶಮಾಡಿದ್ದು ಅನುಚಿತವಾಯಿತೆಂದು ಅವನಿಗನಿಸಿತು. ಆ ಯುವಕ ಅದರ ಮರ್ಮವನ್ನೆಲ್ಲಾ ತಿಳಿದುಕೊಂಡು ಬಿಟ್ಟಿದ್ದಾನೆ!

ಚಕ್ರವರ್ತಿಗೆ ಮತ್ತೆ ಕೀಲುಕುದುರೆಯ ಮಾತೆತ್ತಿದರೆ ಸಿಂಹಸ್ವಪ್ನವಾಯಿತು. ಆತನು ತನ್ನ ಮಗನೊಂದಿಗೆ "ಮಗೂ ದೇವರ ಕೃಪೆಯಿಂದ ನೀನು ಮತ್ತೆ ನಮಗೆ ಸಿಕ್ಕಿದೆ. ಮತ್ತೆಂದೂ ನೀನು ಆ ಹಾಳುಕುದುರೆಯ ಗೋಜಿಗೆ ಹೋಗಬೇಡ. ಅದು ಮಂತ್ರ



ಮಾಯೆಗಳಿಂದ ಮಾಡಲ್ಪಟ್ಟಿರುವ ಅಶ್ವ. ಬಹುಶಃ ಅದರ ರಹಸ್ಯಗಳಲ್ಲಿ ನಿನಗೆ ಅರ್ಧ ಭಾಗವಾದರೂ ತಿಳಿದಿರಲಾರದು " ಎಂದನು.

ಅಕ್ಮಾರನು ಮನೆಗೆ ಹಿಂತಿರುಗಿದನಾದರೂ ಅವನಿಗೆ ಸದಾ ಸನಾನಗರದ ರಾಜಕುಮಾರಿ ನಹರ್ ತನ್ನ ಕಣ್ಣಮುಂದೆ ಸುಳಿದಾಡುವಂತೆ ತೋರುತಿತ್ತು. ಒಂದು ವಾರವೆಲ್ಲ ಸತ್ಕಾರ, ವಿನೋದಗಳಲ್ಲಿ ಭಾಗವಹಿಸುತ್ತಿದ್ದರೂ ಅವನು ಆಕೆಯನ್ನು ಕ್ಷಣವಾದರೂ ಮರೆತಿರಲಿಲ್ಲ.

ಒಂದುದಿನ ಅವನಿಗೆ ಆಕೆಯನ್ನು ನೋಡುವ ಅಭಿಲಾಷೆ ತೀವ್ರವಾಯಿತು. ತನ್ನ ತಂದೆಗೆ ತಿಳಿಯದಂತೆ ಅವನು ಉಪ್ಪರಿಗೆಯನ್ನೇರಿ, ಕೀಲುಕುದುರೆಯನ್ನು ಹತ್ತಿ ಯಮನ್ ದೇಶಕ್ಕೆ ಹೊರಟನು. ಅವನು ಮಾಯವಾದ ವಿಷಯ ಕೇಳಿದಕೂಡಲೇ ರಾಜನು ತನ್ನ ಭವನದ ಮೇಲಿದ್ದ ಕೀಲುಕುದುರೆಯನ್ನು ನೋಡಲು ಹೋದನು. ಆದರೆ ಅದು ಅಲ್ಲಿರಲಿಲ್ಲ. ರಾಜನು ತುಂಬಾ ಸಂಕಟಪಟ್ಟನು.

" ಇದ್ದವನು ಒಬ್ಬನೇ ಮಗ! ಅಯ್ಯೋ ಅವನ ಪಾಲಿಗೆ ಈ ಮಾಯಾತುರಂಗ ಎಲ್ಲಿ ವಕ್ರಿಸಿತಪ್ಪಾ! ಅದನ್ನು ಆಗಲೇ ನಾನು ಪುಡಿ ಪುಡಿ ಮಾಡಲಿಲ್ಲವೇಕೆ?" ಎಂದು ರಾಜನು ತಳಮಳಿಸಿದನು.

ರಾತ್ರಿ ಹೊತ್ತೇರಿದನಂತರ ಅಕ್ಮಾರ್ ಸನಾನಗರದ ರಾಜಕುಮಾರಿಯ ಅಂತಪುರದ ಉಪ್ಪರಿಗೆಯಮೇಲೆ ಬಂದಿಳಿದನು. ಮೆಲ್ಲನೆ ಅಂತಃಪುರವನ್ನು ಪ್ರವೇಶಿಸಿ, ರಾಜಕುಮಾರಿಯ ಶಯನಾಗಾರವನ್ನು ಸಮಿಾ







ನನ್ನನ್ನು ಮರೆಯಲಿಕ್ಕೇ ಇಲ್ಲ. ನನ್ನಂತೆಯೇ ಅವರ ಪ್ರೇಮವೂ ಅಪಾರವಾದುದು," ಎಂದಳು ರಾಜಕುಮಾರಿ ಅಳುತ್ತಾ.

ಇದೇ ಸಮಯವೆಂದು ಅಕ್ಕಾರ್ ಪರದೆಯನ್ನು ಪಕ್ಕಕ್ಕೆ ಸರಿಸಿ ಮಂದಹಾಸ ಬೀರುತ್ತಾ ಒಳಗೆ ಪ್ರವೇಶಿಸಿದನು. ರಾಜಕುಮಾರಿಯ ಸಖಿಯರು ನಿಶ್ಚೇಷ್ಟಿತರಾದರು. ರಾಜಕುಮಾರಿಯ ಮುಖ ಅರಳಿತು. "ನಿಮಗಾಗಿ ಎಷ್ಟು ದುಃಖಪಟ್ಟೆನೋ ಗೊತ್ತೇ? ನನ್ನನ್ನು ಒಬ್ಬೊಂಟಿಗಳಾಗಿಬಿಟ್ಟು ಹೊರಟುಬಿಟ್ಟರಿ. ಇನ್ನೊಂದು ದಿನ ತಡಮಾಡಿದ್ದರೆ ನನ್ನ ಶವವನ್ನು ಕಾಣಬೇಕಾಗಿತ್ತು" ಎಂದಳು ರಾಜಕುಮಾರಿ.

"ನಾನೇನು ಮಾಡಲಿ? ನಿನ್ನ ತಂದೆ ನನಗೆ ಅವಮಾನಪಡಿಸಿದ ವಿಷಯ ನಿನಗೆ ಗೊತ್ತಷ್ಟೆ? ಅವರು ನಿನ್ನ ಪಿತಾಜಿಯೆಂದು ಸುಮ್ಮನಿರಬೇಕಾಯಿತು. ಇಲ್ಲದಿದ್ದರೆ ಅವರೆಂದೋ ನನ್ನ ಖಡ್ಗಕ್ಕೆ ಬಲಿಯಾಗಿರುತ್ತಿದ್ದರು. ಹೂಂ, ನನಗೆ ತುಂಬಾ ಹಸಿವಾಗಿದೆ. ಬೇಗ ಊಟ ತರಿಸು" ಎಂದ ಅಕ್ಕಾರ್.

ಚೇಟಿಯರು ಬಗೆಬಗೆಯ ಭಕ್ಷ್ಯಗಳನ್ನು ತಂದು ಇಬ್ಬರಿಗೂ ಬಡಿಸಿದರು. ಹೊಟ್ಟೆ ತುಂಬಾ ಊಟ ಮಾಡಿದನಂತರ ಅಕ್ಕಾರ್ ತನ್ನ ಪ್ರಿಯಳೊಂದಿಗೆ "ನೀನು ನನ್ನಲ್ಲಿ ವಿಶ್ವಾಸವಿಡು. ನಾನು ವಾರಕ್ಕೊಮ್ಮೆ ನಿನ್ನ ಬಳಿಗೆ ಬರುತ್ತೇನೆ. ಬೆಳಗಾಗುವ ಮೊದಲೇ ನಾನು ಇಲ್ಲಿಂದ ಹೊರಟುಬಿಡಬೇಕು"

ಪಿಸಿದನು. ಪರದೆಯ ಮರೆಯಲ್ಲಿ ಯಾರೋ ಮಾತನಾಡುತ್ತಿರುವಂತೆ ಕೇಳಿಸಿತು. ಅಕ್ಕಾರ್ ಅವರ ಸಂಭಾಷಣೆಯನ್ನು ಕಿವಿಕೊಟ್ಟು ಕೇಳಲಾರಂಭಿಸಿದನು.

"ಅಮ್ಮಾ, ಆ ಮೋಸಗಾರನಿಗಾಗಿ ಎಷ್ಟು ದಿನವೆಂತ ನಿದ್ರಾಹಾರಗಳನ್ನು ತೊರೆಯುವಿರಿ? ನಿಮಗಾಗಿ ಅವನು ಸಹ ಇದೇ ರೀತಿ ವ್ಯಸನಪಡುತ್ತಿದ್ದರೆ ಆ ವಿಷಯವೇ ಬೇರೆಯಾಗಿತ್ತು. ಹಾಗಿಲ್ಲದ ಪಕ್ಷಕ್ಕೆ ನೀವೊಬ್ಬರೇ ಏಕೆ ಈ ರೀತಿ ಚಿಂತಿಸಬೇಕು. ನಮ್ಮ ಮಾತು ಕೇಳಿ, ಎದ್ದು ಸ್ನಾನಮಾಡಿ. ಹಿಂದಿನಂತೆಯೇ ಉಲ್ಲಾಸದಿಂದ ಕಾಲಕಳೆಯೋಣ" ಎಂದು ಸಖಿಯರು ರಾಜಕುಮಾರಿಗೆ ಪರಿಪರಿಯಾಗಿ ಹೇಳುತ್ತಿದ್ದರು. "ನಿಮ್ಮ ಮಾತುಗಳೆಲ್ಲ ಸುಳ್ಳು. ಅವರು

ಎಂದನು. "ಅಯ್ಯಯ್ಯೋ, ಇನ್ನು ನಿಮ್ಮನ್ನು ಒಂಟಿಯಾಗಿ ಹೋಗಲು ಬಿಡುವುದಿಲ್ಲ. ನನ್ನನ್ನೂ ಕರೆದುಕೊಂಡು ಹೋಗಿ" ಎಂದಳು ರಾಜಕುಮಾರಿ ನಹಾರ್.

"ನನಗಾಗಿ ನಿನ್ನ ದೇಶವನ್ನು, ತಂದೆ ತಾಯಿಗಳನ್ನು ಬಿಟ್ಟಿರಬಲ್ಲೆಯಾ?" ಎಂದ ಅಕ್ಮಾರ್. ನಿಮಗಾಗಿ ಎಲ್ಲವನ್ನೂ ತ್ಯಜಿಸ ಬಲ್ಲೆ" ಎಂದಳು ರಾಜಕುಮಾರಿ.

ಬೆಳಗಾಗುವುದರೊಳಗೆ ಅವನು ಉಪ್ಪರಿಗೆಯ ಮೇಲಕ್ಕೆ ಹೊರಟನು. ರಾಜಕುಮಾರಿ ತನ್ನ ಬಳಿಯಿದ್ದ ಬೆಲೆಬಾಳುವ ಉಡುಪನ್ನು, ಆಭರಣಗಳನ್ನು ಧರಿಸಿ, ಸಖಿಯರೊಂದಿಗೆ ಅವನಹಿಂದೆ ಹೋದಳು.



ಅಕ್ಮಾರ್ ಕೀಲುಕುದುರೆಯಮೇಲೆ ಹತ್ತಿ ಕುಳಿತು, ತನ್ನ ಹಿಂದೆ ರಾಜಕುಮಾರಿಯನ್ನು ಹತ್ತಿಸಿಕೊಂಡು, ತಮ್ಮಿಬ್ಬರ ಸೊಂಟಕ್ಕೆ ಒಂದು ಸೀರೆಯನ್ನು ಬಿಗಿದು ಕಟ್ಟಿದನು.

ತರುವಾಯ ಅವನು ಕೀಲನ್ನು ಒತ್ತಿದನು. ಕೂಡಲೆ ಕುದುರೆ ಮೇಲಕ್ಕೆ ಹಾರಿತು.

ಅದುವರೆಗೆ ಸುಮ್ಮನಿದ್ದ ಚೇಟಿಯರು ಆರ್ತನಾದಮಾಡಿದರು. ಅದನ್ನು ಕೇಳಿ ರಾಣಿ ಮತ್ತು ರಾಜನು ಅಲ್ಲಿಗೆಓಡಿಬಂದರು.

ರಾಜನು ಅಕ್ಮಾರ್‌ನನ್ನು ಕುರಿತು "ನಮ್ಮ ಮೇಲೆ ಕೃಪೆತೋರು. ನಮ್ಮ ಮಗಳನ್ನು ನಮ್ಮಿಂದ ಬೇರೆ ಮಾಡಬೇಡ" ಎಂದು ಅಂಗಲಾಚಿದರು. ಅದನ್ನು ಕೇಳಿ ಅಕ್ಮಾರ್ ರಾಜಕುಮಾರಿಯೊಂದಿಗೆ "ಏನು ಹೇಳುವೆ? ನೋಡಲ್ಲಿ! ನಿನ್ನ ತಂದೆತಾಯಿಗಳು ನಿನಗಾಗಿ ಶೋಕಿಸುತ್ತಿರುವರು. ಹಿಂತಿರುಗುವೆಯಾ?" ಎಂದು ಕೇಳಿದನು.

"ನೀವೊಬ್ಬರಿದ್ದರೆ ಅವರು ಮಾತ್ರವಲ್ಲ ಬೇರೆ ಯಾರೂ ಅಗತ್ಯವಿಲ್ಲ" ಎಂದಳು ರಾಜಕುಮಾರಿ ದೃಢಮನಸ್ಸಿನಿಂದ.

ಅಕ್ಮಾರ್‌ನ ಹೃದಯ ಅಭಿಮಾನದಿಂದ ತುಂಬಿತುಳುಕಿತು. ಅವನು ತನ್ನ ಗಗನ ಪ್ರಯಾಣವನ್ನು ಮುಂದುವರೆಸಿದನು. ಸಣ್ಣ ಸಣ್ಣ ಝರಿಗಳು, ಹುಲ್ಲುಗಾವಲು ಇದ್ದ ಸ್ಥಳದಲ್ಲಿ ಇಳಿದು ವಿಶ್ರಾಂತಿಪಡೆದು, ಮಾರನೇಯ ದಿನ ಬೆಳಗಾಗುವ ವೇಳೆಗೆ ತಮ್ಮ ನಗರವನ್ನು ಸೇರಿಕೊಂಡರು. ಅವನು ಕೀಲುಕುದುರೆಯನ್ನು ನಗರದಾಚೆಯಿದ್ದ ಉದ್ಯಾನವನದಲ್ಲಿ ಇಳಿಸಿ

ದನು. ತನ್ನ ಭಾವಿಪತ್ನಿಯನ್ನು ನಗರಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗ ಬೇಕೆಂದು ಅವನ ಉದ್ದೇಶವಾಗಿತ್ತು.

ಅಕ್ಕಾರನು ತನ್ನ ಪ್ರಿಯಳನ್ನು ಉದ್ಯಾನದ ನಡುವಿನ ಮಂಟಪದಲ್ಲಿ ಇರಿಸಿ "ನಾನು ಈಗ ಅರಮನೆಗೆ ಹೋಗಿ ನೀನು ಬಂದಿರುವ ವಿಷಯವನ್ನು ನನ್ನ ತಂದೆತಾಯಿಗಳಿಗೆ ತಿಳಿಸುವೆನು. ಕೀಲುಕುದುರೆ ಇಲ್ಲೇ ಇರಲಿ. ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರು. ನಿನಗೆ ಸುದ್ದಿ ಕಳುಹಿಸಿದಾಗ ಪ್ರತ್ಯೇಕವಾಗಿ ನಿನಗಾಗಿ ಏರ್ಪಡಿಸುವ ನಿನ್ನ ಸ್ವಂತಗೃಹಕ್ಕೆ ಬರುವಿಯಂತೆ" ಎಂದನು.

ತರುವಾಯ ಅವನೊಂದು ಸಾಮಾನ್ಯ ಕುದುರೆಯನ್ನು ಏರಿ ಅರಮನೆಗೆ ಹೋದನು. ಅವನು ಕಾಣಿಸಿದಕೂಡಲೇ ಚಕ್ರವರ್ತಿ ಅವನನ್ನು ಪ್ರೀತಿಯಿಂದ ಅಪ್ಪಿಕೊಂಡನು.

"ಅಪ್ಪಾ, ನನ್ನೊಂದಿಗೆ ಸನಾರಾಜಕುಮಾರಿ ಬಂದಿದ್ದಾಳೆ. ಆಕೆಯನ್ನು ಮೆರವಣಿಗೆಯಲ್ಲಿ ಕರೆತರುವ ಏರ್ಪಾಟುಮಾಡಿಸಬೇಕು" ಎಂದ ಅಕ್ಕಾರ್.

ಚಕ್ರವರ್ತಿ ಸಂತೋಷತುಂಬಿದ ಹೃದಯದಿಂದ ಒಪ್ಪಿಕೊಂಡನು. ಮೆರವಣಿಗೆ ತುಂಬಾ ವಿಜೃಂಭಣೆಯಿಂದ ನಡೆಸುವಂತೆ ಆಜ್ಞಾಪಿಸಿದನು. ಮದುಮಗಳನ್ನು ಕರೆತರಲು ತಾನೇ ಸ್ವತಃ ಹೊರಟುನಿಂತನು.

ರಾಜಕುಮಾರಿಗಾಗಿ ಅಕ್ಕಾರ್ ಒಂದು ಸಿಂಹಾಸನವನ್ನು ಅಲಂಕರಿಸಿ, ಅದರ ಸುತ್ತಲೂ ಚೆಲುವಾದ ಸೇವಿಕೆಯರನ್ನು ನಿಲ್ಲಿಸಿದನು. ತಾನೂ ಉತ್ತಮವಾದ ಉಡುಪನ್ನು ಧರಿಸಿಕೊಂಡನು.

ಆದರೆ ಅವನು ಮೆರವಣಿಗೆಯೊಂದಿಗೆ ಹೋಗಲಿಲ್ಲ. ಆ ಮೆರವಣಿಗೆ ಉದ್ಯಾನ ಸೇರಲು ತುಂಬಾ ಸಮಯ ಹಿಡಿಯುವುದು. ಆದುದರಿಂದ ಅವನು ವೇಗವಾಗಿ ಓಡುವ ಕುದುರೆಯನ್ನು ಹತ್ತಿ ಅಡ್ಡದಾರಿಯಲ್ಲಿ ಕ್ಷಣಮಾತ್ರದಲ್ಲಿ ಉದ್ಯಾನವನವನ್ನು ಸೇರಿಕೊಂಡನು. ಆದರೆ ಮಂಟಪದಲ್ಲಿ ರಾಜಕುಮಾರಿ ನಹರ್ ಕಾಣಿಸಲಿಲ್ಲ. ಮಂಟಪದ ಹೊರಗಿದ್ದ ಕೀಲುಕುದುರೆ ಸಹ ಕಾಣಿಸಲಿಲ್ಲ. ಅಕ್ಕಾರ್ ಎದೆ ಗುಂದಿದನು. [ಇನ್ನೂ ಇದೆ]





# ಅದೃಷ್ಟದ ಆಟ

ಶಾಂತಿಗ್ರಾಮದಲ್ಲಿ ವೀರಯ್ಯ ಎಂಬಾತ ನಿದ್ದನು. ಅವನು ಕಡುಲೋಭಿ. ಅವನಿಗೆ ಸ್ವಂತವಾಗಿ ಚೂರಗಲಭೂಮಿ ಇಲ್ಲದಿದ್ದರೂ ಹೆಂಡತಿಯ ಕಡೆಯಿಂದ ತುಂಬಾ ಆಸ್ತಿ ಅವನ ಸ್ವಾಧೀನಕ್ಕೆ ಬಂದಿತ್ತು. ಹೊಲಗದ್ದೆಗಳಿಗೆ ಕೊಂಚ ಹಣ ಖರ್ಚುಮಾಡಿದರೆ ಅದರಿಂದ ತುಂಬಾ ವರಮಾನ ಬರುತಿತ್ತು. ಆದರೆ ವೀರಯ್ಯ ಕಿಲುಬುಕಾಸೂ ಸಹ ವೆಚ್ಚಮಾಡುತ್ತಿರಲಿಲ್ಲ. ದೊಡ್ಡದೊಂದು ಮನೆಯಿತ್ತು. ಆದರೆ ಅದಕ್ಕೆ ಎಂದೂ ರಿಪೇರಿಮಾಡಿಸುವ ಗೋಜಿಗೆ ಹೋಗಿರಲಿಲ್ಲ ವೀರಯ್ಯ. ಕ್ರಮೇಣ ಅದೊಂದು ದೆವ್ವದ ಕೊಂಪೆಯಂತೆ ಕಾಣಿಸುತಿತ್ತು. ಅನೇಕ ವರ್ಷಗಳಿಂದ ಹೆಂಚಿನಕಡೆ ಗಮನಕೊಡದಿದ್ದರಿಂದ ಮನೆಯೆಲ್ಲಾ ಸೋರುತಿತ್ತು. ಅಂಗಳಕ್ಕೆ ಪೌಳಿಗೋಡೆ ಇಲ್ಲದಿದ್ದ ಕಾರಣ ಹಂದಿಗಳು, ಕೋತಿಗಳು ಇಷ್ಟಾನುಸಾರವಾಗಿ ಅಲ್ಲೆಲ್ಲಾ ಓಡಾಡುತ್ತಿದ್ದುವು. ಬೀಜಬಿತ್ತಿದರೆ, ಸಸಿನಾಟಿದರೆ ಅದನ್ನೆಲ್ಲಾ ನಾಶಮಾಡುವುವು.

ವೀರಯ್ಯನ ಬಳಿ ರಾಮನೆಂಬ ನೌಕರನಿದ್ದನು. ಅವನು ತನ್ನ ಯಜಮಾನನೊಂದಿಗೆ "ಅಯ್ಯಾ, ಮನೆಯ ಸುತ್ತಲೂ ಬೇಲಿ ಹಾಕಿಸಬಾರದೇ? ಯಥೇಚ್ಛವಾಗಿ ತರಕಾರಿ ಬೆಳಸಬಹುದು, ವರ್ಷವೆಲ್ಲ ಮನೆಮಕ್ಕಳೆಲ್ಲರೂ ತಿಂದುತೇಗಬಹುದು." ಎಂದು ಅನೇಕ ಬಾರಿ ಹೇಳಿದ್ದನು.

ಅದಕ್ಕೆ ವೀರಯ್ಯ "ಮುಚ್ಚೋಬಾಯಿ. ನಿಮ್ಮ ಉಳಿತಾಯ ನನಗೆ ಗೊತ್ತಿಲ್ಲವೇ? ನನ್ನ ಕೈಯಿಂದ ಹತ್ತು ರೂಪಾಯಿ ಖರ್ಚು ಮಾಡಿಸಿ ಮೂರು ರೂಪಾಯಿ ಸಂಪಾದನೆ ತೋರಿಸುವ ಜಾಣರು ನೀವು. ತರಕಾರಿಯಿಲ್ಲದಿದ್ದರೆ ಆಗುವುದಿಲ್ಲವೇ?" ಎನ್ನುತ್ತಿದ್ದನು.

ವೀರಯ್ಯ ಎಷ್ಟು ಹಣ ಬಂದರೂ ಸಂದುಕದಲ್ಲಿ ಸೇರಿಸುವನೇ ಹೊರತು ಒಂದು ಕಾಸೂ ವೆಚ್ಚಮಾಡುತ್ತಿರಲಿಲ್ಲ. ತಾನು ಹರಿದುಹೋದ ಅರಿವೆಗಳನ್ನು ಹಾಕಿಕೊಂಡು ಓಡಾಡುವನು. ತನ್ನ ಪತ್ನಿಯನ್ನೂ ಸಹ ಜೊಂತೆಗಳನ್ನುಟ್ಟು ತಿರುಗುವಂತೆ ಮಾಡಿದ್ದ ಆಕೃಪಣ. ಹಬ್ಬಹುಣ್ಣಿ

ಕೆ. ಎಸ್. ಶರ್ಮ



ಮೆಗಳಲ್ಲಿ ಒಂದು ಸೀರೆಯನ್ನಾದರೂ ಆಕೆಗೆ ತೆಗೆದುಕೊಟ್ಟವನಲ್ಲ ಪುಣ್ಯಾತ್ಮ.

ವೀರಯ್ಯನಿಗೆ ಇಬ್ಬರು ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು. ಎಲ್ಲರೂ ನೋಡಲು ಸುರೂಪಿಗಳು; ಬುದ್ಧಿವಂತರು. ಹಿರಿಯವನಾದ ರಾಜನಿಗೆ ವಿದ್ಯೆಯೂ ಚೆನ್ನಾಗಿ ಹಿಡಿದಿತ್ತು. ಅವನಿಗೆ ವೈದ್ಯನಾಗಬೇಕೆಂಬ ಆಶೆ. ಆದರೆ ವೀರಯ್ಯ ಅವನ ವಿದ್ಯಾಭ್ಯಾಸಕ್ಕೆ ಸಹಾಯಮಾಡಲು ನಿರಾಕರಿಸಿದನು. ಬೇಸಾಯವಾದರೂ ಮಾಡೋಣವೆಂದರೆ ಅದಕ್ಕೆ ಬೇಕಾಗುವ ಉಪಕರಣಗಳನ್ನು ಒದಗಿಸಲಿಲ್ಲ. ರಾಜನಿಗೆ ತೀರಾ ಬೇಸರವಾಗಿ ಯಾರಿಗೂ ಹೇಳದೆ ಹೊರಟುಬಿಟ್ಟನು. ರಾಜನ ನಂತರ ಹೆಣ್ಣು ಮಗಳು ಸೀತೆ.



ಸೀತೆ ಚೆಂದೊಳ್ಳೆ ಹುಡುಗಿ. ಕೈಗಳಿಗೆ ಸಾದಾ ಬಳೆ ತೊಟ್ಟುಕೊಂಡು, ತೇಪೆಹಾಕಿದ ಲಂಗ, ಜಂಪರು ತೊಟ್ಟುಕೊಂಡಿದ್ದರೂ ಅವಳ ಸೌಂದರ್ಯ ಎದ್ದು ಕಾಣುತಿತ್ತು. ಮದುವೆಯ ವಯಸ್ಸಿಗೆ ಬಂದ ಆ ಹುಡುಗಿ ಮೋಡದ ಮರೆಯಲ್ಲಿರುವ ಚಂದ್ರನಂತಿದ್ದಳು.

ಸೀತೆಯ ತರುವಾಯ ಹುಟ್ಟಿದವಳು ರುಕ್ಮಿಣಿ. ಅವಳಿಗೆ ಸಂಗೀತವೆಂದರೆ ಪ್ರಾಣ. ಆದರೆ ವೀರಯ್ಯ ರುಕ್ಮಿಣಿಗೆ ಸಂಗೀತ ಕಲಿಸಲು ಒಪ್ಪಲಿಲ್ಲ. ಗೋಪಿ ಎಲ್ಲರಿಗಿಂತಲೂ ಕಿರಿಯ. ಕೂಲಿಮಾಡದಲ್ಲಿ ಕಲಿಯುತ್ತಿದ್ದ. ವೀರಯ್ಯನ ಪತ್ನಿ ತುಂಬಾ ಯೋಗ್ಯಳು. ಆಕೆಯಾದುದರಿಂದಲೇ ವೀರಯ್ಯನೊಂದಿಗೆ ಹೇಗೋ ಬಾಳುವೆ ಮಾಡುತ್ತಿದ್ದಳು. ಮತ್ತೆ ಯಾರಾದರೂ ಆಗಿದ್ದರೆ ಬಾವಿಗೋ ಕೆರೆಗೋ ಬೀಳುತ್ತಿದ್ದರು. ಆಕೆಯ ಸಹನೆ, ತಾಳ್ಮೆ ವರ್ಣನಾತೀತವಾದುದು. ಮನೆಯ ಖರ್ಚಿಗಾಗಿ ಇಟ್ಟುಕೊಂಡಿದ್ದ ಬೆಣ್ಣೆ ತುಪ್ಪಗಳನ್ನು ಉಳಿಸಿ, ಅದನ್ನು ನೆರೆ ಹೊರೆಯವರಿಗೆ ಮಾರಿ, ಬಂದ ಹಣದಿಂದ ಮಕ್ಕಳಿಗೆ ತಿಂಡಿತಿನುಸುಗಳನ್ನೋ, ಹೆಣ್ಣು ಮಕ್ಕಳಿಗೆ ಬಟ್ಟೆಬರೆಗಳನ್ನೋ ತೆಗೆದುಕೊಡುವಳು.

ವೀರಯ್ಯನ ಕುಟುಂಬಕ್ಕೆ ನಿಜವಾದ ಗಂಡುದಿಕ್ಕೆಂದರೆ ರಾಮು. ಅವನು ಬುದ್ಧಿವಂತ. ತುಂಬಾ ಸಮರ್ಥ. ಬೇರೆಲ್ಲಾದರೂ ಹೋಗಿ ಕೆಲಸ ಮಾಡಿದರೆ ಅವನಿಗೆ ಕೈ ತುಂಬಾ ಸಂಬಳಸಿಗುತಿತ್ತು. ಜೀವನಸ್ಥಿತಿಯೂ





ಸುಧಾರಿಸುತಿತ್ತು. ಆದರೆ ಅವನು ವೀರಯ್ಯನ ಮಡದಿಮಕ್ಕಳನ್ನು ನೋಡಿ ಅಲ್ಲೇ ಉಳಿದು ಬಿಟ್ಟನು. ತಾನು ಆ ಮನೆಬಿಟ್ಟ ಮಾರನೇಯ ದಿನವೇ ಅವರಪಾಡು ನಾಯಿಗಿಂತಲೂ ಕಡೆ ಯಾಗುವುದೆಂದು ಅವನಿಗೆ ತಿಳಿದಿತ್ತು. ಅಷ್ಟೇ ಅಲ್ಲದೆ ಅವನು ಸೀತೆಯನ್ನು ಪ್ರೇಮಿಸಿದ್ದನು.

ಇರುವ ಹಣವನ್ನು ಯೋಗ್ಯರೀತಿಯಲ್ಲಿ ವಿನಿಯೋಗಮಾಡಿಕೊಳ್ಳುವ ಯೋಗ್ಯತೆಯಿಲ್ಲ ದಿದ್ದರೂ, ಇತರರ ಸೊತ್ತನ್ನು ಹಾರಿಸುವ ಅನೇಕ ಮಾಯೋಪಾಯುಗಳು ವೀರಯ್ಯನಿಗೆ ಕರಗತವಾಗಿದ್ದುವು. ಒಮ್ಮೆ ಭಾರಿ ಪ್ರವಾಹ ಬಂದು ನೆರೆಯಗ್ರಾಮವೆಲ್ಲಾ ಕೊಚ್ಚಿಕೊಂಡು ಹೋಯಿತು. ಆಗ ವೀರಯ್ಯ ಅಲ್ಲಿಗೆ ಹೋಗಿ ಪ್ರವಾಹದಲ್ಲಿ ಕೊಚ್ಚಿಕೊಂಡು ಬರುತ್ತಿದ್ದ ಮರದ ಸಾಮಾನುಗಳನ್ನೂ, ಕುರಿಕೋಳಿಗ ಳನ್ನೂ ಅಡ್ಡಗಟ್ಟಿ ತನ್ನ ಮನೆಗೆ ಸೇರಿಸಿ ಕೊಂಡನು. ಈ ಹೇಯಕಾರ್ಯಗಳಿಗೆ ರಾಮ ನನ್ನೂ ಸಂಗಡ ಕರೆದುಕೊಂಡು ಹೋಗು ವನು. ರಾಮನಿಗಂತೂ ಇಂತಹ ಕೀಳುಕೆಲಸ ಗಳೆಂದರೆ ಆಗದು. ಆದರೆ ಯಜಮಾನನು ಹೇಳಿದಂತೆ ಮಾಡಲೇ ಬೇಕಷ್ಟೆ!

ಒಂದು ದಿನ ವೀರಯ್ಯ ರಾಮನೊಂದಿಗೆ "ಹೇ, ಏಣಿ ತೆಗೆದುಕೊಂಡು ನನ್ನೊಂದಿಗೆ ದೇವಸ್ಥಾನಕ್ಕೆ ಬಾ." ಎಂದನು.

ರಾಮನು ಚಕಿತನಾಗಿ "ಗುಡಿಗೆ ಏಣಿ ಏಕೆ ಸ್ವಾಮಿ" ಎಂದು ಕೇಳಿದನು. "ಧ್ವಜ ಸ್ತಂಭದಮೇಲೆ ಜೇನು ಗೂಡು ಕಟ್ಟಿದೆ.



ಆ ಜೇನುತುಪ್ಪವನ್ನು ಮನೆಗೆ ತಂದು ಕೊಳ್ಳೋಣ. ಮೂರು ವೀಸೆ ಜೇನುತುಪ್ಪ ಸುಮ್ಮನೇಕೆ ಬಿಡಬೇಕು" ಎಂದ ವೀರಯ್ಯ.

"ಅದು ದೇವರ ಸೊತ್ತು. ನಮಗೆ ಬೇಡ ಸ್ವಾಮಿ" ಎಂದ ರಾಮು.

"ದೇವರೇ ನಮ್ಮ ಸೊತ್ತು ಕಣೋ. ಆ ಗುಡಿಸ್ಥಳ ಯಾರದೆಂದು ತಿಳಿದಿರುವೆ? ನಮ್ಮ ಮಾವಂದಿರ ಮುತ್ತಾತಂದಿರದು ಆ ಜಾಗ." ಎಂದ ವೀರಯ್ಯ.

ಇಬ್ಬರೂ ಏಣಿಯೊಂದಿಗೆ ದೇವಸ್ಥಾನಕ್ಕೆ ಹೋದರು. ವೀರಯ್ಯ ತನ್ನ ಭುಜದಮೇಲೆ ಹಾಕಿಕೊಂಡಿದ್ದ ಕಂಬಳಿ ತೆಗೆದು ರಾಮನಿಗೆ ಕೊಡುತ್ತಾ "ಇದನ್ನು ಹೊದೆದುಕೊಂಡು ಹೋಗಿ ಜೇನನ್ನು ಓಡಿಸಿ, ಮಚ್ಚಿನಿಂದ ಜೇನು



ತುಪ್ಪವನ್ನು ಕೊಚ್ಚಿಕೊಂಡುಬಾ" ಎಂದನು.

"ನಾನು ಹತ್ತಲಾರೆ ಸ್ವಾಮಿ. ಇದು ಹಳೇ ಏಣಿ. ಕುಟ್ಟಿತಿಂದಿದೆ" ಎಂದ ರಾಮು.

"ಮೂಢ. ತಿನ್ನೋದೊಂದು ಬಿಟ್ಟು ಬೇರೆಯಾವ ಕೆಲಸಕ್ಕೂ ಪ್ರಯೋಜನವಿಲ್ಲ. ಶುದ್ಧ ಅಪ್ರಯೋಜಕ ನೀನು. ನಾನೇ ಏಣಿ ಹತ್ತಿ, ತುಪ್ಪ ತರುತ್ತೇನೆ" ಎಂದು ವೀರಯ್ಯ ಕಂಬಳಿಯನ್ನು ಚೆನ್ನಾಗಿ ಹೊದೆದುಕೊಂಡು ಮೆಟ್ಟಲು ಹತ್ತಿದನು. ಅವನು ಸಮೀಪಕ್ಕೆ ಬರಲು ಜೇನ್ನೊಣಗಳು ಕೆರಳಿ ಮೇಘದಂತೆ ಮೇಲೆ ಹಾರಿ ವೀರಯ್ಯನನ್ನು ಮುತ್ತಿದುವು. ಅವನೆಷ್ಟು ಜಾಗ್ರತೆಯಾಗಿದ್ದರೂ, ಜೇನುಹುಳಗಳು ಕಂಬಳಿಯೊಳಗೆ ತೂರಿ, ಕಚ್ಚಿದುವು. ವೀರಯ್ಯ ಎರಡು ಮೆಟ್ಟಲು ಇಳಿಯುವಷ್ಟರಲ್ಲಿ ಕಾಲುಜಾರಿ ಕೆಳಗೆ ಬಿದ್ದುಬಿಟ್ಟನು. ವೀರಯ್ಯನ ತಲೆ ಕೆಳಗಿದ್ದ ಕಲ್ಲಿನಮೇಲೆ ಬಿದ್ದು ಭಾರಿ ಗಾಯವಾಗಿ, ರಕ್ತ ಸೋರಲಾರಂಭಿಸಿತು. ಅವನ ಸ್ಥಿತಿನೋಡಿ ಸತ್ತೇ ಹೋಗಿರಬೇಕೆಂದು ರಾಮನಿಗೆ ಗಾಬರಿಯಾಯಿತು. ಅವನು ವೀರಯ್ಯನನ್ನು ಮನೆಗೆತ್ತಿಕೊಂಡು ಹೋಗಿ ಮಂಚದಮೇಲೆ ಮಲಗಿಸಿದನು.

ಆದರೆ ವೀರಯ್ಯನು ಸಾಯಲಿಲ್ಲ. ವೈದ್ಯನು ಬಂದು ಗಾಯಕ್ಕೆ ಕಟ್ಟುಕಟ್ಟಿದನು. ಎರಡು ವಾರಗಳಲ್ಲಿ ತಲೆಯ ಗಾಯವಾಸಿ ಆಯಿತು. ಆದರೆ ವೀರಯ್ಯನ ಮೆದುಳುಮಾತ್ರ ಕೆಟ್ಟು ಹೋಯಿತು. ಅವನಿಗೆ ಮಾತೇ ನಿಂತು ಹೋಯಿತು. ಅವನಿಗೆ ಯಾರನ್ನೂ ಗುರುತು ಹಿಡಿಯಲಾಗುತ್ತಿರಲಿಲ್ಲ. ಅದೇಕೋ ರಾಮನನ್ನು ಕಂಡರೆಮಾತ್ರ ತುಂಬಾ ಹೆದರುವನು. ರಾಮನು ಏನು ಹೇಳಿದರೂ ಮಾಡುವನು. ಹೀಗಾಗಿ ಮನೆಯ ವ್ಯವಹಾರವೆಲ್ಲ ರಾಮಯ್ಯನ ಕೈಗೆ ಬಂದಿತು. ವೀರಯ್ಯನ ಹಿರಿಯ ಮಗ ರಾಜ, ನಗರದಲ್ಲಿರುವನೆಂದು ತಿಳಿದ ಕೂಡಲೇ ಅವನನ್ನು ಮನೆಗೆ ಕರೆಯಿಸಿ "ತಮ್ಮಾ, ನಿನಗೆ ಡಾಕ್ಟರಿಕೆ ಕಲಿಯುವ ಅಪೇಕ್ಷೆಯಿದ್ದರೆ ಕಲಿ. ಅಭ್ಯಂತರ ಹೇಳುವವರು ಯಾರೂ ಇಲ್ಲ," ಎಂದನು ರಾಮು.

ವೀರಯ್ಯ ಅನೇಕ ವರ್ಷಗಳಿಂದ ಕಾಸಿಗೆ ಕಾಸು ಕೂಡಿಸಿಟ್ಟಿದ್ದ ಹಣ ಕೈಗೆ ಬಂದ ಕೂಡಲೇ ರಾಮನು ಮನೆಯ ಸುತ್ತಲೂ ಬೇಲಿ ಹಾಕಿಸಿ ಹಿತ್ತಲಲ್ಲಿ ತರಕಾರಿ ಬೆಳೆ

ಸಿದನು. ಹೊಲಕ್ಕೆ ಕೆಲವು ಗಾಡಿ ಗೊಬ್ಬರ ಹೊಡೆಯಿಸಿದನು. ಮನೆಗೆ ಹೆಂಚು ಹಾಕಿಸಿ, ಸುಣ್ಣ ಬಳಿಸಿದನು. ಮುರಿದಿದ್ದ ಬಾಗಿಲು, ಕಿಟಿಕೆಗಳನ್ನು ಸರಿಮಾಡಿಸಿದನು. ಈಗ ವೀರಯ್ಯನ ಮನೆ ಮತ್ತು ಹಿತ್ತಲು ನೋಡಲು ಲಕ್ಷಣವಾಗಿ ಕಾಣಿಸುತಿತ್ತು. ದನಗಳಿಗೂ, ಕೋಳಿಗಳಿಗೂ ಕೊಟ್ಟಗೆಗಳು ತಯಾರಾದುವು. ಮನೆಯವರೆಲ್ಲರಿಂದಲೂ ಕೆಲಸ ಮಾಡಿಸಿದನು. ವೀರಯ್ಯನೂ ಸಹ ದುಡಿಯಬೇಕಾಯಿತು. ರಾಮನು ಹೇಳಿದ ಕೆಲಸ ಮಾಡಿ ಮುಗಿಸುತ್ತಿದ್ದ ವೀರಯ್ಯ. ರಾಮನು ಇದಕ್ಕೆಲ್ಲಾ ಖರ್ಚುಮಾಡಿದ ಹಣ ಎರಡು ವರ್ಷಗಳಲ್ಲೇ ಬಂದುಬಿಟ್ಟಿತು. ಕ್ರಮೇಣ ವರಮಾನ ಬೆಳೆಯಿತು. ಈಗ ಮನೆಯವರೆಲ್ಲ ಒಳ್ಳೆ ಅರಿವೆಗಳನ್ನು ಹಾಕಿಕೊಳ್ಳುತ್ತಿದ್ದರು. ಹೆಣ್ಣು ಮಕ್ಕಳ ಮೈಮೇಲೆ ಕೆಲವಾರು ಒಡವೆಗಳು ಕಾಣಿಸಿಕೊಂಡವು. ಎಷ್ಟೋ ದಿನಗಳನಂತರ ಅವರು ನೋಡಲು ಮರ್ಯಾದಸ್ಥ ಕುಟುಂಬದವರಂತೆ ಕಾಣಿಸಿದರು. ರುಕ್ಮಿಣಿ ಸಂಗೀತ ಕಲಿಯುತ್ತಿದ್ದಳು. ಅವಳ ಶಾರೀರವೂ ತುಂಬಾ ಸೊಗುಸಾಗಿತ್ತು.

ವೀರಯ್ಯನ ಹೆಂಡತಿ ತನ್ನ ಮಗಳ ಮನೋಭಾವವನ್ನು ಅರಿತು, ರಾಮನೊಂದಿಗೆ "ಮಗೂ, ರಾಮು, ಎಲ್ಲಾ ಸರಿ, ಸೀತೆಯ ಮದುವೆಯ ವಿಷಯವೇನಪ್ಪಾ ಮಾಡಿದೆ? ಅವಳಿಗೆ ಹದಿನೆಂಟು ತುಂಬಿತು. ನಿನಗೇ ಕೊಡಬೇಕೆಂದು ನನ್ನ ಅಭಿಲಾಷೆ" ಎಂದಳು. ರಾಮ ಸಂತೋಷದಿಂದ ಒಪ್ಪಿಕೊಂಡನು.





ನೊಂದಿಗೆ ವೀರಯ್ಯನೂ ಸಹ ಹುಲ್ಲಿನ ಕಂತೆಗಳನ್ನು ಗಾಡಿಗೆ ಹೇರಿದನು. ಕೊನೆಯ ಸಲ ಗಾಡಿ ಮನೆ ಸೇರುವವೇಳೆಗೆ ನಸಕು ಕತ್ತಲಾಯಿತು. ಗಾಡಿ ತುಂಬಾ ತುಂಬಿದ್ದರೂ ಸಹ ಇನ್ನೂ ಕೆಲವಾರು ಕಂತೆ ಹುಲ್ಲು ಉಳಿದಿತ್ತು. ಈ ಮಾತ್ರಕ್ಕೆ ಮತ್ತೆ ಬರಲೇಕೆಂದು ರಾಮನು ಅವುಗಳನ್ನೂ ಸಹ ಗಾಡಿಯಮೇಲೆ ಹೇರಿ ಹಗ್ಗದಿಂದ ಬಿಗಿದುಕಟ್ಟಿದನು. ಮೇಲೆ ಹತ್ತಿಕುಳಿತುಕೊಳ್ಳುವಂತೆ ವೀರಯ್ಯನಿಗೆ ಹೇಳಿ, ಗಾಡಿಯನ್ನು ಮನೆಗೆ ಓಡಿಸಿದನು.

ಗ್ರಹಚಾರ ಕಡಿಮೆಯಾಗಿ ಗಾಡಿಯ ಚಕ್ರವೊಂದು ಬಂಡೆಯ ಮೇಲೇರಿ ಗಾಡಿ ತುಸ ಒಂದು ಕಡೆಗೆ ಬಾಗಿತು. ಮೇಲೆ ಕುಳಿತಿದ್ದ ವೀರಯ್ಯ ದೊಪ್ಪನೆ ಕೆಳಗೆ ಬಿದ್ದುಬಿಟ್ಟನು. ಈ ವಿಷಯ ತಿಳಿದಕೂಡಲೇ ರಾಮನು ಎತ್ತುಗಳನ್ನು ನಿಲ್ಲಿಸಿ, ಗಾಡಿಯಿಂದಿಳಿದು, ವೀರಯ್ಯನ ಬಳಿಗೆ ಓಡಿದನು.

ಈ ಸಾರಿ ಸಹ ವೀರಯ್ಯನ ತಲೆಗೆ ಏಟು ಬಿದ್ದಿತು. ಅವನು ಮೆಲ್ಲನೆ ಏಳುತ್ತಾ "ಲೋ ರಾಮು, ಜೇನುಹುಳು ತುಂಬಾ ಕಡಿಯುತ್ತಿದೆಯಲ್ಲೋ" ಎಂದ. ನಾಲ್ಕು ವರ್ಷಗಳ ನಂತರ ಅವನು ಮಾತನಾಡಿದುದು ಇದೇ ಮೊದಲು. ಈ ನಡುವೆ ನಡೆದ ವಿಷಯಗಳಾವುವೂ ಅವನಿಗೆ ತಿಳಿಯದಿದ್ದರೂ ಅವನು ಮತ್ತೆ ಮಾಮೂಲು ಮನುಷ್ಯನಾದನು.

ರಾಮನು ವೀರಯ್ಯನ ಕೈ ಹಿಡಿದು ಎಬ್ಬಿಸಿ "ಅದು ಇಂದಿನಮಾತೇ! ಅದು ನಡೆದು

ಇಬ್ಬರಿಗೂ ಮದುವೆ ಆಯಿತು. ಮಾರನೇಯ ವರ್ಷವೇ ಸೀತೆ ಒಂದು ಗಂಡು ಮಗುವನ್ನು ಹಡೆದಳು. ಇನ್ನೊಂದು ವರ್ಷ ಕಳೆಯಿತು. ರಾಜನು ವೈದ್ಯವೃತ್ತಿಯನ್ನು ಅವಲಂಬಿಸಿದನು. ರುಕ್ಮಿಣಿ ಸಂಗೀತದಲ್ಲಿ ಪ್ರವೀಣಳೆನ್ನಿಸಿಕೊಂಡಳು. ಗೋಪಿಯ ವ್ಯಾಸಂಗ ಸಹ ಮುಂದುವರೆಯುತಿತ್ತು.

ವೀರಯ್ಯನಿಗೆ ಬಾಯಿಬಿದ್ದು ಹೋಗಿ ನಾಲ್ಕುವರ್ಷಗಳಾಗಿದ್ದುವು. ಹೊಲದ ಕೆಲಸಗಳೆಲ್ಲ ಆಗಿದ್ದರೂ ಸಹ, ಹುಲ್ಲಿನ ಕಂತೆಗಳು ಮಾತ್ರ ಹೊಲದಲ್ಲೇ ಉಳಿದುಬಿಟ್ಟಿದ್ದುವು. ಅದನ್ನು ಮನೆಗೆ ಸೇರಿಸಲು ರಾಮನು ಗಾಡಿ ಕಟ್ಟಿ, ವೀರಯ್ಯನನ್ನು ಸಂಗಡ ಕರೆದುಕೊಂಡು ಹೊಲಕ್ಕೆ ಹೋದನು. ರಾಮ

ನಾಲ್ಕು ವರ್ಷ ಆಯಿತಲ್ಲ" ಎಂದನು. ವೀರಯ್ಯ ರಾಮನಕಡೆ ವಿಸ್ಮಯದಿಂದ ನೋಡಿದನು. ರಾಮನು ಅರ್ಥವಿಲ್ಲದೆ ಮಾತನಾಡುತ್ತಿರುವಂತೆ ಆವನಿಗೆ ತೋರಿತು. ಆದರೆ ಮರುಕ್ಷಣವೇ ಸುತ್ತಮುತ್ತ ನೋಡಿ, ತಾನೇ ಭ್ರಮೆಗೊಂಡಂತೆ ಅರಿತನು. ಅವನು ರಾಮನನ್ನು ತೀಕ್ಷ್ಣವಾಗಿ ನೋಡಿ ' ಲೊ, ರಾಮ, ನೀನು ತುಂಬಾ ಬದಲಾಯಿಸಿದ್ದಿಯೋ" ಎಂದನು.

"ನಾಲ್ಕು ವರ್ಷವಾಯಿತಲ್ಲಾ, ಬದಲಾಯಿಸುವುದಿಲ್ಲವೆ" ಎಂದ ರಾಮು.

ಮಾತೆತ್ತಿದರೆ ರಾಮನು ನಾಲ್ಕು ವರ್ಷವೆಂದು ಹೇಳುವುದರ ರಹಸ್ಯವೇನೋ ಅವನಿಗೆ ತಿಳಿಯದಾಯಿತು. ಅವನು ಗಾಡಿಯ ಕಡೆ ನೋಡಿ "ಈ ಗಾಡಿ ಯಾರದೋ?" ಎಂದು ಕೇಳಿದನು.

"ನಮ್ಮದು" ಎಂದ ರಾಮು.

"ನಮ್ಮ ಹತ್ತಿರ ಗಾಡಿ ಇಲ್ಲವಲ್ಲೋ" ಎಂದ ವೀರಯ್ಯ.

"ಇರಲಿಲ್ಲವೆಂದೇ ಕೊಂಡುಕೊಳ್ಳಬೇಕಾಯಿತು. ಗಾಡಿಯಿಲ್ಲದ ವ್ಯವಸಾಯ ಎಂತಹ ಬೇಸಾಯ? ಈ ಹುಲ್ಲೆಲ್ಲಾ ಮನೆ ಸೇರಿಸುವುದಾದರೂ ಹೇಗೆ?" ವಿವರಿಸಿದ.

"ಈ ಹುಲ್ಲು ನಮ್ಮ ಮನೆಗೆ ಹೋಗುವುದೇ? ಯಾರಿಂದ ಕೊಂಡುಕೊಂಡೆ?" ವೀರಯ್ಯ ಕೇಳಿದ. "ನಮ್ಮ ಹೊಲದ್ದೇ ರಾಯರೆ" ಎಂದ ರಾಮು. ಪ್ರಶ್ನೆ ಹಾಕಿದಂತೆ ಅರ್ಥವಿಲ್ಲದ ವಿಷಯಗಳನ್ನು ರಾಮನು ಹೇಳುತ್ತಿರುವುದನ್ನು ಕಂಡು ವೀರಯ್ಯ ಬೆದರಿದ. ಆದುದರಿಂದ ಅವನು ಮತ್ತೇನೂ ಕೇಳದೆ ಮಾತು ನಿಲ್ಲಿಸಿ, ಗಾಡಿಯನ್ನು ಹತ್ತಿದ.



ಗಾಡಿ ಮನೆಯ ಸಮೀಪಕ್ಕೆ ಬರಲು ವೀರಯ್ಯ "ಆ ಮನೆ ಯಾರದೋ?" ಎಂದು ಕೇಳಿದ. ರಾಮನು ತಮ್ಮದೆಂದು ಹೇಳಿದನು.

"ಯಾರೋ ಅದು ಹಾಯಾಗಿ ಹಾಡುತಿರುವುದು?" ಎಂದು ಬೆರಗಾದ ವೀರಯ್ಯ.

"ನಮ್ಮ ರುಕ್ಮಿಣಿ ಹಾಡ್ತಾಳೆ. ಮೂರು ವರ್ಷಗಳಿಂದ ಸಂಗೀತ ಕಲಿತುಕೊಳ್ಳುತ್ತಿದ್ದಾಳೆ" ಎಂದ ರಾಮು.

ಇಷ್ಟರಲ್ಲಿ ಸೀತೆ ಮಗುವನ್ನು ಎತ್ತಿಕೊಂಡು ಮನೆಯ ಹೆಬ್ಬಾಗಿಲಿಗೆ ಬಂದಳು. "ಯಾರೋ ದೊಡ್ಡ ಮನೆಯವರ ಹುಡಿಗಿ

ಯಂತಿದ್ದಾಳೆ. ಆಕೆ ಯಾರು?" ಎಂದು ಕೇಳಿದ ವೀರಯ್ಯ. ಅವನಿಗೆ ತನ್ನ ಮಗಳ ಗುರುತೇ ಸಿಕ್ಕಲಿಲ್ಲ.

"ನಿಮ್ಮ ಮಗಳು ಸೀತೆ" ಎಂದ.

"ಹಾಂ. ಸೀತೆಗೆ ಮಗು ಇರುವುದೆಂದರೇನು?" ವೀರಯ್ಯ ಚಕಿತನಾಗಿ ನುಡಿದ.

"ಓ, ನಾನು ಹೇಳುವುದನ್ನು ಮರೆತಿದ್ದೆ. ನನಗೂ ಸೀತೆಗೂ ಎರಡು ವರ್ಷಗಳಹಿಂದೆ ಮದುವೆಯಾಯಿತು. ಆ ಮಗು ನಿಮ್ಮ ಮೊಮ್ಮಗ" ಎಂದ ರಾಮು.

ರಾಮಯ್ಯನ ಮಾತುಗಳು ವೀರಯ್ಯನಿಗೆ ಸ್ವಲ್ಪ ಸ್ವಲ್ಪವಾಗಿ ಅರ್ಥವಾಗುತ್ತಾ ಬಂತು. ಆದರೆ ಅವನಿಗೆ ಈ ಬದಲಾವಣೆಗಳು ಮೊದಮೊದಲು ಹಿಡಿಸಲಿಲ್ಲ. ಮನೆ ಮತ್ತು ಹಿತ್ತಲು ಕಳಕಳಿಸಾಡುತ್ತಿರುವುದೂ, ತನ್ನ ಮಕ್ಕಳು ಬೆಲೆಬಾಳುವ ಅರಿವೆಗಳನ್ನು ಹಾಕಿಕೊಂಡಿರುವುದೂ, ಕೊಟ್ಟಿಗೆಯ ತುಂಬಾ ದನಕರುಗಳಿರುವುದೂ ಅವನಿಗೆ ಸಂತೋಷವನ್ನುಂಟು ಮಾಡಿದರೂ, ಇದಕ್ಕೆ ಎಷ್ಟು ಹಣ ಸುರಿದನೋ ಏನೋ, ಎಷ್ಟು ಸಾಲ ಮಾಡಿರುವರೋ ಏನೋ ಎಂದು ಮೊದಲೇ ಬಹಳವಾಗಿ ಭೀತಿಗೊಂಡನು.

"ಒಂದು ಕಾಸಾದರೂ ಸಾಲಮಾಡಲಿಲ್ಲ. ಹೊಲಹಿತ್ತಿಲುಗಳಲ್ಲಿ ಬಂಗಾರ ಬೆಳೆಯುತ್ತಿದೆ; ದನಕರುಗಳಿಂದಲೂ ಹಣಬರುತ್ತಿವೆ. ನಿಮ್ಮ ಹಿರಿಯ ಮಗ ವೈದ್ಯನಾಗಿದ್ದಾನೆ; ಎಲ್ಲರಿಗೂ ಹೊಟ್ಟೆತುಂಬಾ ತಿಂಡಿ, ಮೈತುಂಬಾ ಬಟ್ಟೆ ಇದೆ. ಎಲ್ಲರೂ ಹೀಗೆ ಸುಖವಾಗಿ ಬಾಳಬಹುದೆಂದು ನಾನು ಎಂದೋ ನಿಮಗೆ ಹೇಳಿದ್ದೆ. ನೀವು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಈಗೆಲ್ಲಾ ಬದಲಾಗಿದೆ" ಎಂದ ರಾಮು.

ವೀರಯ್ಯ ಮಾತನಾಡಲಿಲ್ಲ. ಹಿಂದಿನಂತೆ ತನ್ನ ಹೆಂಡತಿಯಮೇಲಾಗಲೀ, ಮಕ್ಕಳ ಮೇಲಾಗಲೀ ಅಧಿಕಾರ ಚಲಾಯಿಸುವ ಧೈರ್ಯ ಆತನಿಗಿಲ್ಲ. ಸುಖವಾಗಿ ಬಾಳುತ್ತಿದ್ದುದರಿಂದ ಗೋಪಿಯಿಂದ ಹಿಡಿದು ಎಲ್ಲರೂ ದೊಡ್ಡ ಮನೆತನದವರಂತೆ ಕಾಣಿಸಿದರು. ಅದರಿಂದ ಅವನು ಮನೆ ವ್ಯವಹಾರಗಳನ್ನೆಲ್ಲಾ ರಾಮನಿಗೇ ವಹಿಸಿ, ಎಲ್ಲರೂ ಹೇಳಿದಂತೆ ಕೇಳಿಕೊಂಡು ಸುಮ್ಮನಿದ್ದನು.






## 14

[ರೂಪಧರನ ಮಗನಾದ ಧೀರಮತಿ ತನ್ನ ತಂದೆಯನ್ನುಕುರಿತು ಸುದ್ದಿ ತಿಳಿದುಕೊಳ್ಳಲು ಪೈಲಾಸ್‌ಗೆ ಹೋಗಿ, ತನ್ನನ್ನು ಕೊಲ್ಲಲು ಸಮುದ್ರದಮೇಲೆ ಹೊಂಚ ಕುಳಿತಿದ್ದ ಶತ್ರುಗಳ ಕೈಗೆ ಸಿಕ್ಕದೆ, ಹಂದಿಚೇಕನ ಮನೆಗೆ ಹೋಗಿ ತನ್ನ ತಂದೆಯನ್ನು ಕಂಡನು. ತಂದೆ ಮಕ್ಕಳಿಬ್ಬರೂ ಕೂಡಿ ಶತ್ರುಗಳನ್ನು ನಾಶಪಡಿಸಲು ರೂಪಧರನು ಒಂದು ಹಂಚಿಕೆ ಹೂಡಿ, ಧೀರಮತಿಗೆ ಮುಂದಿನ ಕರ್ತವ್ಯವನ್ನು ತಿಳಿಸಿದನು.]

**ಬೆ**ಳಗಾದಕೂಡಲೇ ಧೀರಮತಿ ಎದ್ದು ನಗರಕ್ಕೆ ಹೊರಟನು. ಅವನು ಹೋಗುವಮುನ್ನ ಹಂದಿಚೇಕನೊಂದಿಗೆ "ತಾತಾ, ನಾನು ಮನೆಗೆ ಹೋಗುತ್ತಿದ್ದೇನೆ. ನನ್ನನ್ನು ಕಣ್ಣಾರೆ ಕಾಣುವವರೆಗೆ ನಮ್ಮ ತಾಯಿಗೆ ಸಮಾಧಾನವಿರುವುದಿಲ್ಲ. ಈ ವೃದ್ಧನಿಗೆ ಅಲೆದಾಡುವುದು ಅಭ್ಯಾಸವಾಗಿದೆ. ಒಂದೇಕಡೆ ಕುಳಿತಿದ್ದರೆ ಆತನಿಗೂ ಬೇಸರವಾಗಬಹುದು. ಅತನನ್ನು ನಗರಕ್ಕೆ ಕರೆದುಕೊಂಡು ಬಾ. ನಾಲ್ಕು ರಸ್ತೆಗಳಲ್ಲಿ ಓಡಾಡಿ, ಹಸಿವಾದರೆ ಎಲ್ಲೋ ಒಂದುಕಡೆ ತಿರುಪೆಬೇಡಿ ತಿನ್ನುತ್ತಾನೆ" ಎಂದ.

"ಹೌದು, ಮಗು! ಇಲ್ಲೇ ಇರುವಂತೆ ಹೇಳಿದರೂ ನಾನಿರಲಾರೆ. ಬಿಕ್ಷೆಬೇಡುವವನಿಗೆ ಎಲ್ಲರ ಮನೆಯೂ ತನ್ನದೇ ಅಲ್ಲವೇ? ನೀನು ಹೋಗು, ಮಗು. ಕೊಂಚಹೊತ್ತು ಮೈ ಕಾಯಿಸಿಕೊಂಡು, ಬಿಸಿಲೇರಿದನಂತರ ಈತನೊಂದಿಗೆ ನಗರಕ್ಕೆ ಬರುತ್ತೇನೆ. ನನ್ನ ಅಂಗಿ ನೋಡು- ಬಟ್ಟೆನೋಡು. ಎಲ್ಲಾ ಚಿಂದಿಯಾ

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ಗಿದೆ. ಚಳಿಗೆ ತಾಳಲಾರೆ'' ಎಂದ ರೂಪಧರ ತನ್ನ ಮಗ ಧೀರಮತಿಯೊಂದಿಗೆ.

ಧೀರಮತಿ ಸಡಗರದಿಂದ ಮನೆಗೆ ಹೊರಟನು. ತನ್ನ ಮನೆಗೆ ಬಂದು ವಕ್ರಿಸಿರುವ ಪುಂಡರಮೇಲೆ, ತಾನು ಮತ್ತು ತನ್ನ ತಂದೆ ಮುಂದೆ ಮಾಡಲಿರುವ ಹತ್ಯಾಕಾಂಡವನ್ನು ಕುರಿತು ಯೋಚಿಸುತ್ತಾ ನಡೆದನು. ಅವನು ಮನೆ ಸೇರಿದಕೂಡಲೇ ಕೈಯಲ್ಲಿದ್ದ ಈಟಿಯನ್ನು ಒಂದು ಸ್ತಂಭಕ್ಕೆ ಒರಗಿಸಿ ಪಡಸಾಲೆಯನ್ನು ಪ್ರವೇಶಿಸಿದನು. ದಾಸದಾಸಿಯರು ಅವನನ್ನು ಕಂಡು ಆನಂದತುಂದಿಲರಾದರು.

ಇಷ್ಟರಲ್ಲಿ ಪದ್ಮಮುಖಿ ಉಪ್ಪರಿಗೆಯಿಂದ ಇಳಿದುಬಂದು ಮಗನನ್ನು ಅಪ್ಪಿಕೊಂಡು "ಮಗೂ ಬಂದೆಯಾ, ನಾನು ಮತ್ತೆ ನಿನ್ನನ್ನು



ನೋಡುವೆನೆಂದು ಭಾವಿಸಿರಲಿಲ್ಲ. ನಿಮ್ಮ ತಂದೆಯವರ ವಿಷಯ ತಿಳಿಯಲೋಸುಗ, ನನ್ನೊಂದಿಗೂ ಹೇಳದೆ ಪೈಲಾಸ್‌ಗೆ ತೆರಳಿದೆ. ಏನು ಸುದ್ದಿ ತಂದಿರುವೆ ಕಂದಾ?'' ಎಂದು ಅತ್ಯಾತುರದಿಂದ ಕೇಳಿದಳು.

"ನಾನು ಸಾವಿನ ಬಾಯಿಂದ ಸ್ವಲ್ಪದರಲ್ಲಿ ತಪ್ಪಿಸಿಕೊಂಡ ವಿಷಯವೇನೋ ನಿಜ. ಆದರೆ ನಾವೀಗ ಕಣ್ಣೀರು ಸುರಿಸುತ್ತಾ ಕೂಡುವ ಸಮಯವಿದಲ್ಲ. ನೀನು ಕೂಡಲೇ ಸ್ನಾನ ಮಾಡಿ, ನಮ್ಮ ಶತ್ರುಗಳು ನಾಶವಾಗುವಂತೆ ಅನುಗ್ರಹಿಸಬೇಕೆಂದು ದೇವರನ್ನು ಬೇಡಿಕೋ. ನಾನಿಷ್ಟರಲ್ಲಿ ಒಮ್ಮೆ ನಗರದಲ್ಲಿ ಸುತ್ತಾಡಿಕೊಂಡು ಬರುತ್ತೇನೆ. ಹಾಂ, ಹೇಳಲು ಮರೆತಿದ್ದೆ. ನನ್ನೊಂದಿಗೆ ಪೈಲಾಸ್‌ನಿಂದ ಒಬ್ಬಾತನು ಬಂದಿರುವನು. ಆತನನ್ನು ಇಲ್ಲಿಗೆ ಕರೆತರುತ್ತೇನೆ'' ಎಂದ ಧೀರಮತಿ.

ಆ ಅಥಿತಿಯೊಬ್ಬ ದೈವಜ್ಞ. ಪೈಲಾಸಿನಿಂದ ಧೀರಮತಿ ಹೊರಡುತ್ತಿರುವಾಗ ತನ್ನನ್ನು ಸಹ ಹಡಗಿನಲ್ಲಿ ಹತ್ತಿಸಿಕೊಳ್ಳುವಂತೆ ಆತನು ಅಂಗಲಾಚಿದನು. ಧೀರಮತಿ ಹಡಗಿನಿಂದಿಳಿದು ಹಂದಿಚೀಕನ ಬಳಿಗೆ ಹೊರಟಾಗ ಆತನು ಇತರ ನಾವಿಕರೊಂದಿಗೆ ಹಡಗಿನಿಂದಿಳಿದು ನೆಟ್ಟಗೆ ನಗರಕ್ಕೆ ಹೋದನು.

ಮಗನ ಬಯಕೆಯಂತೆ ಪದ್ಮಮುಖಿ ಸ್ನಾನ ಮಾಡಿ, ಶುಚಿಯಾದ ಬಟ್ಟೆಗಳನ್ನು ಧರಿಸಿ ತಮ್ಮ ಶತ್ರುಗಳ ಸಂಹಾರ ನಿರ್ವಿಘ್ನವಾಗಿ ನಡೆಯುವಂತೆ ಅನುಗ್ರಹಿಸೆಂದು ದೇವರನ್ನು



ಬೇಡಿಕೊಂಡಳು. ಧೀರಮತಿ ಹೊರಗೆ ಬಂದು ತನ್ನ ಈಟಿಯನ್ನು ತೆಗೆದುಕೊಂಡು, ತನ್ನ ಪ್ರೀತಿಯ ಬೇಟೆನಾಯಿಗಳೊಡನೆ ಠೀವಿಯಿಂದ ಪೇಟೆಗೆ ಹೊರಟನು. ಅವನ ಮನೆಯನ್ನು ಸೇರಿದ್ದ ಪುಂಡರು ಅವನ ಸುತ್ತಲೂ ಸೇರಿ ಕುಶಲಪ್ರಶ್ನೆಗಳನ್ನು ಹಾಕಿದರು. ಆದರೆ ಅವರ ಹೃದಯದಲ್ಲಿ ಮಾತ್ರ ದ್ವೇಷಾಗ್ನಿ ಪ್ರಜ್ವಲಿಸುತಿತ್ತು.




ಧೀರಮತಿ ಅವರಿಗೆ ಉದಾಸೀನವಾಗಿ ಉತ್ತರಕೊಟ್ಟು ಮುಂದೆ ನಡೆದನು. ಅಲ್ಲಿಂದ ಅವನು ತನ್ನ ತಂದೆಯ ಮಿತ್ರರಿದ್ದ ಸ್ಥಳಕ್ಕೆ ಹೋಗಿ, ಅವರು ಕೇಳಿದ ಪ್ರಶ್ನೆಗಳಿಗೆ ಸದುತ್ತರಗಳನ್ನು ಕೊಡುತ್ತಿದ್ದನು.

ಕೊಂಚ ಹೊತ್ತಿಗೆ ಅಲ್ಲಿಗೆ ನಾವಿಕರ ಹಿರಿಯನು ಅತಿಥಿಯನ್ನು ಸಂಗಡ ಕರೆದುಕೊಂಡು ಬಂದನು. ಆತನು ಧೀರಮತಿಯೊಂದಿಗೆ "ಪ್ರತಾಪನು ನಿನಗೆ ಕೊಟ್ಟ ಕಾಣಿಕೆಗಳು ನಮ್ಮ ಮನೆಯಲ್ಲಿವೆ. ನೌಕರರನ್ನು ಕಳುಹಿಸಿ ಮನೆಗೆ ತರಿಸಿಕೊ" ಎಂದನು.

"ನಮ್ಮ ಮನೆಯಲ್ಲಿರುವ ದುರಾಶೆಯ ದೈತ್ಯರು ಎಂದು ಯಾವ ಕ್ಷಣದಲ್ಲಿ ನನ್ನ ಕತ್ತು ಹಿಚುಕಿ ಸಾಯಿಸುವರೋ ಯಾರು ಬಲ್ಲರು? ಈಗಿರುವ ಸೊತ್ತನ್ನೆಲ್ಲಾ ದೋಚಿಕೊಳ್ಳಲು ಅವರು ಹವಣಿಸುತ್ತಿರುವರು. ಅನ್ಯಾಯವಾಗಿ ಅವರಿಗೇಕೆ ಇದೂ ಹೋಗಬೇಕು. ಸದ್ಯಕ್ಕೆ ಅದೆಲ್ಲಾ ನಿಮ್ಮ ಮನೆಯಲ್ಲೇ ಇರಲಿ. ಈ ಪುಂಡರ ಹಾವಳಿ ಕೊನೆಗೊಂಡನಂತರ ನೀನೇ ಅದನ್ನು ತಂದು ನಮ್ಮ ಮನೆ ಸೇರಿಸು" ಎಂದು ಧೀರಮತಿ ಅವನಿಗೆ ಹೇಳಿದ.

ತರುವಾಯ ಅವನು ತನ್ನ ಅತಿಥಿಯನ್ನು ಸಂಗಡ ಕರೆದುಕೊಂಡು ಮನೆಗೆ ಹೋದನು. ಪಡಸಾಲೆಯಲ್ಲಿದ್ದ ಆಸನಗಳಮೇಲೆ ತಿವಾಸಿ ಹರಡಿದ್ದರು. ದಾಸಿಯರು ಅತಿಥಿಗೆ ಸ್ನಾನ ಮಾಡಿಸಿ, ತೊಟ್ಟುಕೊಳ್ಳಲು ಉಚಿತ ಉಡುಪುಗಳನ್ನು ಕೊಟ್ಟರು. ಆತನಿಗೂ, ಧೀರಮತಿಗೂ ಅಡಿಗೆಮಾಡಿ ಬಡಿಸಿದರು. ಅವರು ಊಟ ಮಾಡುತ್ತಿರುವಾಗ ಪದ್ಮಮುಖಿ ಅವರಮುಂದೆ ಒಂದು ಆಸನದಮೇಲೆ ಕುಳಿತು ಕದಿರಿನಿಂದ ನವಿರಾದ ನೂಲು ತೆಗೆಯುತ್ತಿದ್ದಳು.

ಊಟ ಮುಗಿದ ನಂತರ ಆಕೆ ತನ್ನ ಮಗನೊಂದಿಗೆ "ಮಗೂ, ಆ ಪುಂಡರು ಬರು

ವಷ್ಟರಲ್ಲಿ ನೀನು ನಿನ್ನ ತಂದೆಯವರ ಸುದ್ದಿಯನ್ನು ವಿವರಿಸಿ ಹೇಳು ನನಗೆ" ಎಂದಳು.

"ವಿವರಿಸಿ ಹೇಳುವೆನು, ಕೇಳಮ್ಮಾ. ನಾನು ಪೈಲಾಸಿಗೆ ಹೋಗಿ ನವದ್ಯೋತನನ್ನು ಕಂಡೆ. ಆತನೂ, ಆತನ ಮಕ್ಕಳೂ ನನ್ನನ್ನು ಆದರದಿಂದ ಬರಮಾಡಿಕೊಂಡರು. ಆದರೆ ಆತನಿಗೆ ತಂದೆಯವರ ವಿಷಯವೇನೂ ತಿಳಿಯದಂತೆ. ಆದುದರಿಂದ ನಾನು ಆತನ ಮಗನೊಂದಿಗೆ ಪ್ರತಾಪನಿದ್ದ ದೇಶಕ್ಕೆ ಗಾಡಿಯಲ್ಲಿ ಹೋದೆ. ನಮ್ಮ ಪರಿಸ್ಥಿತಿಯನ್ನು ಕೇಳಿ ಪ್ರತಾಪನು ಪರಿತಾಪಪಟ್ಟನು. ನಮ್ಮ ಮನೆಯನ್ನು ಆಕ್ರಮಿಸಿಕೊಂಡಿದ್ದ ದುರಳರ ಮೇಲೆ ಕೆಂಡಕಾರಿದನು. ತಂದೆಯವರು ಹಿಂದಿರುಗಿ ಬಂದು ಇವರೆಲ್ಲರನ್ನೂ ನಿಮಿಷಮಾತ್ರದಲ್ಲಿ ಯಮಸದನಕ್ಕೆ ಕಳುಹಿಸುವರೆಂದು ಹೇಳಿದನು. ಅವರು ಯಾವುದೋ ದ್ವೀಪದಲ್ಲಿರುವುದಾಗಿ ಮುದಿಪ್ರಯಾಣಿಕನೊಬ್ಬನು ತನ್ನೊಂದಿಗೆ ಹೇಳಿದುದಾಗಿ ಪ್ರತಾಪನು ಹೇಳಿದನು. ಆ ತರುವಾಯ ನಾನು ಮನೆಗೆ ಹಿಂತಿರುಗಿದೆ. ಇದಕ್ಕಿಂತಲೂ ಹೆಚ್ಚಿನ ಸುದ್ದಿ ಏನಿಲ್ಲ" ಎಂದನು.

ಇವರ ಸಂಭಾಷಣೆಯನ್ನು ಕೇಳುತ್ತಿದ್ದ ಅತಿಥಿ ಪದ್ಮಮುಖಿಯೊಂದಿಗೆ "ಅಮ್ಮಾ, ನನ್ನ ಮಾತು ಕೇಳಿ. ನಿಮ್ಮ ಯಜಮಾನರು ಈ ದೇಶಕ್ಕೆ ಬಂದಿದ್ದಾರೆ. ಈ ಮನೆಯಲ್ಲಿ ನಡೆಯುತ್ತಿರುವ ದಾರುಣಕೃತ್ಯಗಳು ಆತನಿಗೆ ತಿಳಿದಿದೆ. ಈ ಪುಂಡರಿಗೆ ಆತನ ಕೈಯಲ್ಲಿ ಸಾವು ಖಂಡಿತ. ಹೀಗೆಂದು ನನ್ನ ಅಂತರ್ವಾಣಿ



ಹೇಳುತ್ತಿದೆ." ಎಂದು ಭವಿಷ್ಯ ನುಡಿದನು. "ಸ್ವಾಮಿ, ನಿಮ್ಮ ಮಾತಿನಂತೆ ನಡೆದುದಾದರೆ ನೀವು ಕೋರಿದುದನ್ನೆಲ್ಲಾ ಕೊಡುವೆನು" ಎಂದಳು ಪದ್ಮಮುಖಿ.

ಈ ರೀತಿಯಾಗಿ ಮೂವರು ಮಾತನಾಡುತ್ತಿರುವಾಗ ದುರುಳರು ಮನೆಯ ಮುಂದಿದ್ದ ಆವರಣದಲ್ಲಿ ವ್ಯಾಯಾಮಕ್ರೀಡೆಗಳಲ್ಲಿ ಮಗ್ನರಾಗಿದ್ದರು. ಕೆಲವರು ಭಾರವಾದ ಗುಂಡುಗಳನ್ನು ಎಸೆಯುತ್ತಿದ್ದರು. ಮತ್ತೆ ಕೆಲವರು ಗುರಿಯಿಟ್ಟು ಈಟಿಗಳನ್ನು ಎಸೆಯುತ್ತಿದ್ದರು. ಇಷ್ಟರಲ್ಲಿ ಅವರ ನೌಕರನು ಬಂದು "ಮಧ್ಯಾಹ್ನವಾಯಿತು. ಆಟಗಳನ್ನು ನಿಲ್ಲಿಸಿ, ಊಟಕ್ಕೆ ಬನ್ನಿ" ಎಂದು ಕೂಗಿ ಕರೆದನು. ಕೂಡಲೇ ಅವರು ಪಡಸಾಲೆಗೆ ಬಂದು ಆಸನಗಳಲ್ಲಿ ಕುಳಿತರು. ಅಂದು ಕತ್ತರಿಸಿದ ಕುರಿ ಮತ್ತು ಕೋಳಿಗಳನ್ನು ಅಡಿಗೆಮಾಡಿ ಬಡಿಸಲು ಅವರು ಅಟ್ಟಹಾಸದಿಂದ ಊಟ ಮಾಡಲಾರಂಭಿಸಿದರು.

ಅತ್ತ ಹಂದಿಚೇಕನು ರೂಪಧರನೊಂದಿಗೆ "ನಿನ್ನನ್ನು ನಮ್ಮ ಯಜಮಾನರು ನಗರಕ್ಕೆ ಕರೆತರುವಂತೆ ಹೇಳಿದರು. ನಡಿಹೋಗೋಣ. ಈಗಲೇ ಹೊತ್ತಾಯಿತು" ಎಂದನು.

ರಸ್ತೆಯಲ್ಲಿ ನಡೆಯಲು ಕೋಲೊಂದು ಇದ್ದರೆ ಕೊಡುವಂತೆ ಕೇಳಿ ತೆಗೆದುಕೊಂಡು, ತನ್ನ ಜೋಳಿಗೆಯನ್ನು ಭುಜದಮೇಲೆ ಹಾಕಿಕೊಂಡು ರೂಪಧರನು ಹಂದಿಚೇಕನೊಂದಿಗೆ ಮೆಲ್ಲನೆ ಹೊರಟನು. ಹಂದಿಚೇಕನು ದಾರಿ ತೋರಿಸುತ್ತಾ ಮುಂದೆ ನಡೆಯುತ್ತಿದ್ದನು.







ಎಗತಾಳಿಯಾಗಿ ನುಡಿದನು. ಅಷ್ಟು ಮಾತ್ರ ವಲ್ಲದೆ, ಮತ್ತೂ ಆತನು "ಲೋ! ಈ ದರಿದ್ರನನ್ನು ಅರಮನೆಗೆ ಕರೆದುಕೊಂಡು ಹೋದರೆ ಅಲ್ಲಿರುವ ಶ್ರೀಮಂತರು ಇವನಿಗೆ ಚೆನ್ನಾಗಿ ಬುದ್ಧಿ ಹೇಳುತ್ತಾರೆ. ಮುಟ್ಠಾಳ, ತೊಲಗಾಚೆ" ಎಂದು ರೂಪಧರನನ್ನು ಕಾಲಿನಿಂದ ಬಲವಾಗಿ ಒದ್ದನು.

ರೂಪಧರನಿಗೆ ಮಿತಿಮೀರಿದ ಕೋಪ ಬಂತು. ಕೈಯಲ್ಲಿದ್ದ ಕೋಲಿನಿಂದ ಅವನ ತಲೆ ಬಡಿಯಲೇ ಇಲ್ಲ, ಅವನನ್ನು ಎತ್ತಿ ಬಂಡೆಗೆ ಅಪ್ಪಳಿಸಿ, ಸರ್ಪವನ್ನು ಸಾಯಿಸುವಂತೆ ಸಾಯಿಸಲೇ ಎಂದು ಯೋಚಿಸಿದನು. ಆದರೆ ತನ್ನ ಸ್ಥಿತಿಯನ್ನು ಅರಿತು ಕೋಪವನ್ನು ಅದು ಮಿಟ್ಟುಕೊಂಡನು.

ಹಂದಿಚೇಕನು ದಿಗ್ಭ್ರಮೆಗೊಂಡು "ಲೊ, ಕಾಳ ಎಷ್ಟೋ ನಿನ್ನ ಸೊಕ್ಕು? ಯಜಮಾನರು ಬರಲಿ, ನಿನಗೆ ತಕ್ಕ ಶಾಸ್ತಿಯಾಗುವುದು" ಎಂದನು.

"ಇನ್ನು ಆತನು ಬಂದ ಹಾಗೇ ಇದೆ. ಅವರು ಸತ್ತು ಎಷ್ಟೋ ವರ್ಷವಾಗಿರಬೇಕು. ದೇವತೆಗಳು ಧೀರಮತಿಯನ್ನೂ ಸಹ ಹಾಗೇ ತೆಗೆದುಕೊಂಡು ಹೋದರೆ ಉತ್ತಮ. ಇಲ್ಲದಿದ್ದರೆ ಎಂದೋ ಒಂದು ದಿನ ಅವನು ಅವರ ಕೈಯಲ್ಲಿ ಸಾಯುತ್ತಾನೆ." ಎಂದು ಕಾಳನು ಕುರಿಗಳನ್ನು ಅಟ್ಟಿಕೊಂಡು ಹೋದನು.

ಅವನು ಅಟ್ಟಿಕೊಂಡು ಹೋಗುತ್ತಿದ್ದ ಪ್ರಾಣಿಗಳು ಧೀರಮತಿಯ ಮನೆಯನ್ನು

ಅವನಹಿಂದೆ ರೂಪಧರನು ದಿಕ್ಕೆಟ್ಟ ಬಿಕ್ಷುಕನ ರೂಪದಲ್ಲಿ, ಕೋಲನ್ನೂರಿಕೊಂಡು ತನ್ನ ಸ್ವಂತ ಮನೆಗೆ ಹೊರಟನು.

ಅವರು ಒಂದು ಜಲಪಾತವಿದ್ದ ಸ್ಥಳಕ್ಕೆ ಬರಲು ಕೊಬ್ಬಿದ ಕುರಿ, ಮೇಕೆಗಳನ್ನು ಅಟ್ಟಿಕೊಂಡು ಹೋಗುತ್ತಿದ್ದ ಕಾಳನೆಂಬ ಕುರುಬನು ಅವರಿಗೆ ಎದುರಾದನು.

ಅವನು ರೂಪಧರನನ್ನು ಕಂಡು ತಿರಸ್ಕಾರದಿಂದ "ಯಾರಯ್ಯಾ ಈ ಕಂಗಾಲ? ಲೋ ಹಂದಿಚೇಕ, ನಿನಗೆ ಈ ಪೀಡೆ ಎಲ್ಲಿ ಸಿಕ್ಕಿದನೋ? ಇವರ ಮನೆ ಹಾಳಾಗ. ಈ ಬಿಕ್ಷುಕರು ತಿರುಪೆಬೇಡುತ್ತಾ ವೃಥಾ ಪ್ರಜೆಗಳಿಗೆ ತೊಂದರೆಕೊಡುವರೇ ಹೊರತು, ಬೇರೆ ಯಾವ ಕೆಲಸಕ್ಕೂ ಬಾರರು." ಎಂದು



ಸೇರಿದ್ದ ಪುಂಡರ ಅಂದಿನ ಔತಣಕ್ಕೆ ಬೇಕಾಗಿತ್ತು. ಅವನ ಹಿಂದೆಯೇ ಹಂದಿಚೇಕ, ರೂಪಧರರು ಬಂದರು. ರೂಪಧರನು ತನ್ನ ಮನೆಯತ್ತ ದೃಷ್ಟಿಸಿ ನೋಡಿ "ಆಹಾ! ಈ ಭಾರಿ ದೊಡ್ಡ ಅರಮನೆ ರೂಪಧರನದೇ ಆಗಿರಬೇಕು. ಇಷ್ಟೊಂದು ದೊಡ್ಡ ಮನೆ ಇಲ್ಲಿ ಮತ್ತೆ ಬೇರೆ ಯಾರಿಗಿರುತ್ತದೆ. ಒಳಗೆ ಔತಣ ನಡೆಯುತ್ತಿರಬೇಕು. ಅಂತೆಯೇ ಕಮ್ಮನೆಯ ವಾಸನೆ ಬರುತ್ತಿದೆ" ಎಂದನು.

"ವಾಸನೆ ಬರದೇನುಮಾಡುವುದು. ನಮ್ಮ ಮುಂದಿನ ಕರ್ತವ್ಯವನ್ನು ಬೇಗ ನಿರ್ಣಯಿಸು. ಮೊದಲು ನೀನು ಒಳಗೆ ಹೋಗುವೆಯಾ. ಇಲ್ಲ ನಾನು ಹೋಗಿಬರಲೇ? ನೀನು ಬಹಳ ಹೊತ್ತು ಹೊರಗೆ ಅಡ್ಡಾಡಿಕೊಂಡಿದ್ದರೆ ಯಾರಾದರೂ ನಿನ್ನನ್ನು ಇಲ್ಲಿಂದ ಅಟ್ಟಿ ಬಿಡುತ್ತಾರೆ" ಎಂದ ಹಂದಿಚೇಕ.

"ನೀವೇ ಮೊದಲು ಹೋಗಿರಿ. ಯಾರೋ ಏನೋ ಮಾಡುವರೆಂದು ನನಗೆ ಭಯವಿಲ್ಲ. ದೇವರು ನನ್ನನ್ನು ಅನೇಕ ಕಷ್ಟಕೀಟಲೆಗಳಲ್ಲಿ ಸಿಲುಕಿಸಿದ್ದಾರೆ. ಬಾಳಿನಲ್ಲಿ ಎಷ್ಟೋ ಹೊಡತಗಳನ್ನು ತಿಂದಿದ್ದೇನೆ. ಮತ್ತೊಂದು ಪೆಟ್ಟು ಬಿದ್ದರೆ ಚಿಂತೆಯಿಲ್ಲ" ಎಂದ ರೂಪಧರ.

ಅವರು ಹೀಗೆ ಮಾತನಾಡುತ್ತಿರಲು ಅಷ್ಟು ದೂರದಲ್ಲಿ ಗುಂಡಿಯಮೇಲೆ ಮಲಗಿದ್ದ ಮುದಿ ನಾಯಿಯೊಂದು ತಲೆ ಎತ್ತಿ, ಕಿವಿ ನಿಮಿರಿಸಿ ರೂಪಧರನಕಡೆ ನೋಡಿತು. ಅದೊಂದು ಒಳ್ಳೇ ಜಾತಿ ನಾಯಿ.



ಅದರ ಹೆಸರು ಕಾಂತಿ. ಚಿಕ್ಕ ಮರಿಯಾಗಿದ್ದಾಗ ರೂಪಧರನು ಅದನ್ನು ತುಂಬಾ ಮುದ್ದಿಸುತ್ತಿದ್ದ. ಆದರೆ ಅದು ದೊಡ್ಡದಾಗುವ ಮೊದಲೇ ಆತನು ಯುದ್ಧಕ್ಕೆ ಹೊರಟುಬಿಟ್ಟಿದ್ದನು. ಈಗ ಕಾಂತಿಯನ್ನು ಕುರಿತು ಯಾರೂ ಶ್ರದ್ಧೆವಹಿಸುವವರಿಲ್ಲ. ಅದರ ಮೈ ತುಂಬಾ ಕಜ್ಜಿ. ನೋಡಲು ಅಸಹ್ಯವಾಗಿತ್ತು. ಅದು ಆ ಗುಂಡಿಯಮೇಲೆ ಹೊರಳಾಡುತ್ತಾ ಸಾವನ್ನು ಎದುರು ನೋಡುತಿತ್ತು. ತನ್ನ ಯಜಮಾನನನ್ನು ಗುರುತು ಹಿಡಿದು, ಕಿವಿ ನಿಮಿರಿಸಿ, ತನ್ನ ಬಾಲ ಆಡಿಸಿತು. ನಿಶ್ಶಕ್ತತೆಯಿಂದ ಅದು ಅಲ್ಲಿಂದ ಎದ್ದು ಬರಲಿಲ್ಲ.

ಅದನ್ನು ನೋಡಿದಕೂಡಲೇ ರೂಪಧರನ ಕಣ್ಣಿಂದ ಒಂದೆರಡು ಹನಿ ಕಣ್ಣೀರು

ತೊಟ್ಟಿಕ್ಕಿತು. ಆತನು ಹಂದಿಚೇಕನಕಡೆ ತಿರುಗಿ "ಇದು ನೋಡಲು ಒಳ್ಳೇ ಜಾತಿ ನಾಯಿಯಂತೆ ತೋರುವುದು. ಇದನ್ನು ಹೀಗೇಕೆ ಬಿಟ್ಟಿದ್ದಾರೆಯೋ ನಾ ಕಾಣೆ. ಬಹುಶಃ ಇದೊಂದು ಕೆಲಸಕ್ಕೆ ಬಾರದ ನಾಯಿಯಿರಬೇಕು" ಎಂದನು.

"ಆದರ ಯಜಮಾನನಿದ್ದಾಗ ಅದರ ದರ್ಪ ನೋಡಬೇಕಿತ್ತು. ಬೇಟೆಗೆ ಹೋದರೆ ಎಲ್ಲ ನಾಯಿಗಿಂತಲೂ ಮೊದಲು ಓಡಿ ಬೇಟೆ ಮೃಗವನ್ನು ಹಿಡಿಯುತಿತ್ತು. ಅದರ ಯಜಮಾನ ಎಲ್ಲೋ ಏನೋ!" ಎಂದು ವ್ಯಸನದಿಂದ ನಿಟ್ಟುಸಿರುಬಿಟ್ಟು ಹಂದಿಚೇಕನು ಮನೆಯೊಳಗೆ ಪ್ರವೇಶಿಸಿದನು.

ಕಾಂತಿ ತನ್ನ ಯಜಮಾನನ ಕಡೆ ಮತ್ತೊಮ್ಮೆ ನೋಡಿ ಒಂದುಸಾರಿ ಬೊವ್ವನೆ ಬೊಗಳಿ ಮರುಕ್ಷಣವೇ ಪ್ರಾಣತೊರೆಯಿತು.

ಹಂದಿಚೇಕನು ಒಳಗೆ ಪ್ರವೇಶಿಸಿದ ಕೂಡಲೇ ಧೀರಮತಿ ಅವನನ್ನು ಕಂಡು, ಒಳಗೆ ಬರುವಂತೆ ಸನ್ನೆಮಾಡಿದನು. ಹಂದಿಚೇಕನು ಧೀರಮತಿಗೆ ಎದುರಾಗಿ ಆಸೀನನಾದನು.

ಇಷ್ಟರಲ್ಲಿ ರೂಪಧರನು ತನ್ನ ಕೋಲಿನ ಮೇಲೆ ಭಾರಹಾಕಿ ತೀರಾ ನಿಶ್ಶಕ್ತನಂತೆ ಮೆಲ್ಲನೆ ನಡೆಯುತ್ತಾ ಒಳಗೆ ಬಂದು, ಹೊಸಲಿನಬಳಿ ಗೋಡೆಗೆ ಆತುಕೊಂಡು ಆಯಾಸಗೊಂಡವನಂತೆ ನಿಂತನು.

ಧೀರಮತಿ ಮೇಜಿನಮೇಲಿದ್ದ ರೊಟ್ಟಿ ಮತ್ತು ಮಾಂಸವನ್ನು ತಟ್ಟೆಯಲ್ಲಿಟ್ಟು, ಹಂದಿಚೇಕನ ಕೈಗೆ ಕೊಡುತ್ತಾ "ಆ ಮುದುಕನಿಗೆ ಇದನ್ನು ಕೊಡು. ಉಳಿದವರಬಳಿಗೆ ಹೋಗಿ ಬೇಡಿಕೊಳ್ಳುವಂತೆ ಹೇಳು" ಎಂದನು.

ರೂಪಧರನು ಹಂದಿಚೇಕನಿಂದ ರೊಟ್ಟಿ ಮತ್ತು ಮಾಂಸವನ್ನು ತೆಗೆದುಕೊಂಡು "ಯಜಮಾನರನ್ನು ದೇವರು ತಣ್ಣಗಿಟ್ಟಿರಲಿ. ಅವರ ಕೋರಿಕೆಗಳೆಲ್ಲಾ ಈಡೇರಲಿ" ಎಂದು ಆಶೀರ್ವಾದಮಾಡಿದನು.

ಅನಂತರ ರೂಪಧರನು ತಟ್ಟೆಯಲ್ಲಿದ್ದ ರೊಟ್ಟಿಯನ್ನು ತಿಂದು, ಬಿಕ್ಷುಕನಂತೆ ನಟಿಸುತ್ತಾ ಸುತ್ತಲೂ ಕುಳಿತಿದ್ದ ದುರಳರನ್ನು ಸಮೀಪಿಸಿ, ಅವರ ಮುಂದೆ ತನ್ನ ತಟ್ಟೆಯನ್ನು ಒಡ್ಡಲಾರಂಭಿಸಿದನು. [ಇನ್ನೂ ಇದೆ]



# ಗಣೇಶ ಜನ್ಮ

ವಿಘ್ನಗಳನು ನಾಶಗೈವ ದೇವನಾಗಿ ಮೆರೆದೆಯಾ ।
ನೆನೆದ ಕಾರ್ಯವನ್ನು ಸಿದ್ಧಿಗೈವ ದೊರೆಯೆ ಬಂದೆಯಾ ॥
ರಜತ ಶಿಖರದಲ್ಲಿ ಹರನು ಯೋಗಮಗ್ನನಾಗಿರೆ ।
ತ್ರಿಜಗ ಮಾತೆ ಹರನಪ್ರೀತೆ ರಜತಪೀಠದಲ್ಲಿರೆ ॥ ೧ ॥

ಕಡೆದಳೊಂದು ಶಿಲ್ಪವನ್ನು ಹರನು ಬಳಿದ ಬಸಿತದಿ ।
ಪ್ರಾಣವಿತ್ತು, ತ್ರಾಣತೆತ್ತು, ಪಾಲಿಸಿದಳು ವಿಭವದಿ ॥
ಶೈಲಸುತೆಯ ರಚನೆಯಿಂದ ಜಗಕೆ ಬೆಳಗಿಬಂದೆಯಾ ।
ಸಲಿಲತರಲು ಮಾಯೆಸರಿಯೆ ಮನೆಯಕಾಯೆನಿಂದೆಯಾ ॥ ೨ ॥

ಹರನಗಣಗಳೊಟ್ಟುಗೂಡಿ ಬಂದು ನಿನ್ನ ಜರೆಯಲೂ ।
ಯೋಗಮಗ್ನನಾದ ಶಂಭು ತ್ಯಾಗವನ್ನು ಮರೆಯಲೂ ॥
ಸುರಗಿಯನ್ನು ಮುನಿದು ಎತ್ತಿ ನಿನ್ನ ತಲೆಯ ತರಿಯಲೂ ।
ಜಲವತಂದ ಶಿವೆಯು ಮಗನ ಮುರಿದ ರುಂಡಕಂಡಳೂ ॥ ೩ ॥

ಪತಿಯ ಪಾದವನ್ನು ಪಿಡಿದು ನಿಜವನೊರೆಯೆ ಹರನುತಾ ।
ವೀರಭದ್ರನನ್ನು ಕರೆಯುತವನ ಬೇಗ ಅಟ್ಟುತಾ ॥
ಬಡಗು ಮಲಗಿ ಇರ್ಪ ನರರ ರುಂಡವನ್ನು ತರಿದುತಾ ।
ಎನಲು ವೀರಭದ್ರ ಪೋಗಿ ಶೋಧನೆಯನು ಗೈಯುತಾ ॥ ೪ ॥

ಅರಸಿ ನರರು ದೊರೆಯದಿರಲು ಶಯನಗೈವ ಗಜವನೂ ।
ಕಂಡು ತೋಷಗೊಂಡು ಕೈಯ ಖಡ್ಗದಿಂದ ತರಿದನೂ ॥
ಮುರಿದ ರುಂಡ ಕರಿಯರುಂಡ ಒಟ್ಟುಗೂಡಿತಾಗಲೇ ।
ಪರಮ ಪೂಜ್ಯ ನಾಗವದನನೆದ್ದುನಿಂತನಾಗಲೇ ॥ ೫ ॥

— ಪಿ. ರಾಮಕೃಷ್ಣ



# ದೈವದ ಸಲಹೆ

ಅನೇಕಾನೇಕ ವರ್ಷಗಳಹಿಂದೆ ಸಿಂಹಪುರ ದಲ್ಲಿ ವಿಜಯಸಿದ್ಧಿ ಎಂಬ ವೀರನಿದ್ದನು. ಆತನು ರಾಜಾಸ್ಥಾನದಲ್ಲಿ ಕೆಲಸಮಾಡ ದಿದ್ದರೂ ರಾಜನ ಆಪ್ತವರ್ಗದವರಲ್ಲಿ ಒಬ್ಬ ನಾಗಿ, ಸ್ವತಂತ್ರವಾಗಿ ಬಾಳುತ್ತಿದ್ದನು.

ಯುದ್ಧರಂಗದಲ್ಲಿ ವಿಜಯಸಿದ್ಧಿಯನ್ನು ಎದುರುಗೊಂಡವರು ಆತನನ್ನು ಕಂಡಕೂಡಲೇ ಸ್ತಬ್ಧರಾಗುತ್ತಿದ್ದರಂತೆ. ಈಗ ಆತನು ವೃದ್ಧ ನಾಗಿದ್ದರೂ ಸಹ ಭಯಂಕರನಾಗಿಯೇ ಕಾಣು ತ್ತಿದ್ದನು. ಸಣ್ಣ ಪುಟ್ಟ ಮಕ್ಕಳು ಆತನ ಮುಖ ಕಂಡರೆ ಕಿಟಾರನೆ ಕಿರಿಚಿ ಅಳುತ್ತಿದ್ದರು. ದೊಡ್ಡವರಿಗೆ ಆತನನ್ನು ದೃಷ್ಟಿಸಿ ನೋಡಲು ಧೈರ್ಯ ಸಾಲದು!

ವಿಜಯಸಿದ್ಧಿಗೆ ಬಾಲಾಮಣಿ ಎಂಬ ಮಗಳ ಹೊರತು ಬೇರೆ ಸಂತಾನವಿರಲಿಲ್ಲ. ಆತನ ಹೆಂಡತಿ ಕೆಲವು ವರ್ಷಗಳ ಹಿಂದೆ ತೀರಿ ಹೋಗಿದ್ದಳು. ಅಂದಿನಿಂದ ಬಾಲಾಮಣಿಯೇ ಮನೆಗೆ ಹೆಣ್ಣುದಿಕ್ಕು. ಆಕೆ ನೋಡಲು ಎಷ್ಟು ಚೆಲುವೋ, ಅಷ್ಟೇ ಮನೆಗೆಲಸಗಳಲ್ಲಿ ಸಮರ್ಥಳಾಗಿದ್ದಳು. ತಂದೆಗೆ ಯಾವುದೇ ವಿಧವಾದ ಕೊರತೆಯುಂಟಾಗದಂತೆ ಅವಳು ನೋಡಿಕೊಳ್ಳುತ್ತಿದ್ದಳು. "ನನ್ನ ಮಗಳು ನನ್ನನ್ನು ನೋಡಿಕೊಳ್ಳುತ್ತಿರುವವರೆಗೆ ನನಗೆ ಯಾವ ಕೊರತೆಯೂ ಇರಲಾರದು" ಎಂದು ವಿಜಯಸಿದ್ಧಿ ಅಭಿಮಾನದಿಂದ ಹೇಳುವನು.

ಸಿಂಹಪುರದ ಯುವಕರಲ್ಲಿ ಅನೇಕರಿಗೆ ಬಾಲಾಮಣಿಯನ್ನು ವಿವಾಹವಾಗಬೇಕೆಂಬ ಕೋರಿಕೆಯಿದ್ದಿರಬಹುದು. ಆದರೆ ವಿಜಯ ಸಿದ್ಧಿಯ ಎದುರಿನಲ್ಲಿ ಆಕೆಯ ವಿವಾಹದ ವಿಷಯವನ್ನು ಕುರಿತು ಪ್ರಸ್ತಾಪಿಸಲು ಧೈರ್ಯವಿಲ್ಲದೆಯೂ, ಸಕಲ ವಿಧಗಳಲ್ಲಿ ಅಂಗರಕ್ಷಕಳಂತೆ ನೋಡಿಕೊಳ್ಳುತ್ತಿದ್ದ ಮಗ ಳಿಗೆ ಆತನು ವಿವಾಹಮಾಡಲಾರನೆಂಬ ಅನು ಮಾನದಿಂದಲೂ ಯಾರೂ ಆಕೆಯ ಕೈ ಹಿಡಿ ಯಲು ಪ್ರಯತ್ನಿಸಲಿಲ್ಲ.

ರಾಜನ ಆಸ್ಥಾನದಲ್ಲಿ ಕೆಲಸಮಾಡುತ್ತಿದ್ದ ವೀರಭೂಪತಿ ಎಂಬ ತರುಣನು ಆಗಾಗ್ಗೆ ಅವರ ಮನೆಗೆ ಬಂದು ವಿಜಯಸಿದ್ಧಿ ಮತ್ತು

ಬಿ. ಲಕ್ಷ್ಮೀನಾರಾಯಣ

ಬಾಲಾಮಣಿಯರೊಂದಿಗೆ ಅತಿ ಸಲುಗೆಯಿಂದ ಮಾತುಕತೆಯಾಡುತ್ತಿದ್ದನು. ಅವನು ಬಾಲಾ ಮಣಿಯನ್ನು ವಿವಾಹವಾಗುವನೆಂದು ಬಾಯಿ ಬಿಡದಿದ್ದರೂ, ಅವರಿಬ್ಬರಿಗೆ ಮದುವೆಯಾಗುವ ಸಂಭವವಿರುವುದೆಂದು ಮನೆಯಲ್ಲಿದ್ದ ದಾಸಿ ಯರು ಹೇಳಿಕೊಳ್ಳುತ್ತಿದ್ದರು.

ಹೀಗಿರಲು ವಿಜಯಸಿದ್ಧಿಯ ಮನೆಗೆ ಆತನ ದೂರದ ನೆಂಟ ಇಂದ್ರವರ್ಮನೆಂಬ ಯುವ ಕನು ಬಂದನು. ವಿಜಯಸಿದ್ಧಿಯ ಸಹಾಯ ದಿಂದ ಆಸ್ಥಾನದಲ್ಲೊಂದು ನೌಕರಿ ಸಂಪಾ ದಿಸಲು ಅವನು ಅಲ್ಲಿಗೆ ಬಂದಿದ್ದನು. ಇಂದ್ರ ವರ್ಮನು ಸದಾ ಮನೆಯಲ್ಲೇ ಇರುತ್ತಿದ್ದ ನಾದುದರಿಂದಲೂ, ಅತಿಥಿಯ ಉಪಚಾರ ವನ್ನು ಬಾಲಾಮಣಿಯೇ ಖುದ್ದಾಗಿ ವಹಿಸಿ ಕೊಂಡಿದ್ದರಿಂದಲೂ ಇಬ್ಬರಿಗೂ ತುಂಬಾ ಸಲುಗೆ ಬೆಳೆಯಿತು. ಆದರೂ ಇಂದ್ರ ವರ್ಮನು ತನ್ನ ಮನಸ್ಸಿನಲ್ಲಿದ್ದ ಬಯಕೆಯನ್ನು ಬಹಿರಂಗಪಡಿಸಲಿಲ್ಲ. ಹಾಗೆ ಮಾಡಲು ಅವನು ಹೆದರಿದನು. ಅವನಿಗೆ ವಿಜಯಸಿದ್ಧಿಯನ್ನು ಕಂಡರೇನೇ ಹೆದರಿಕೆ.

ಇನ್ನೊಂದು ಕಾರಣವೆಂದರೆ ಬಾಲಾ ಮಣಿಗೆ ತನ್ನಲ್ಲಿ ಪ್ರೇಮವಿದೆಯೋ ಇಲ್ಲವೋ ಅವನಿಗೆ ತಿಳಿಯದು. ಸಲುಗೆಯಿಂದ ಆಕೆ ಯೇನೋ ಮಾತನಾಡುತ್ತಿರಬಹುದು. 'ನಾನು ನಿನ್ನನ್ನು ಪ್ರೇಮಿಸುತ್ತೇನೆ'ಂದು ಹೇಳಿದರೆ ಆಕೆ ತನ್ನೊಂದಿಗೆ ಮಾತನಾಡುವುದನ್ನೇ ನಿಲ್ಲಿಸ ಬಹುದೆಂದು ಇಂದ್ರವರ್ಮನು ಹೆದರಿದನು.



ಇದಲ್ಲದೆ ವೀರಭೂಪತಿ ಬೇರೆ ಶಿವಪೂಜೆ ಯಲ್ಲಿ ಕರಡಿ ಬಿಟ್ಟಂತೆ ಆಡಿಗಡಿಗೆ ಬರುವನು. ಆಪ್ತನೆಂಟನಂತೆ ವಿಜಯಸಿದ್ಧಿ ಮತ್ತು ಬಾಲಾ ಮಣಿಯರೊಂದಿಗೆ ನಿರ್ಭಯವಾಗಿ ಹರಟೆ ಕೊಚ್ಚುವುದನ್ನು ಇಂದ್ರವರ್ಮನು ಒಂದೆರಡು ಸಲ ನೋಡಿ ಅಸೂಯೆಪಟ್ಟಿದ್ದನು. ವೀರ ಭೂಪತಿ ಮತ್ತು ಬಾಲಾಮಣಿಗೂ ವಿವಾಹ ವಾಗಬಹುದೆಂದು ಅವನಿಗೂ ಸಹ ತೋರಿತು.

ಒಂದೆರಡು ವಾರಗಳನಂತರ ವಿಜಯಸಿದ್ಧಿ ಯಾವುದೋ ಕಾರ್ಯನಿಮಿತ್ತ ಗ್ರಾಮಕ್ಕೆ ಹೋದನು. ಬಾಲಾಮಣಿಯೊಂದಿಗೆ ದಿನ ವೆಲ್ಲಾ ಹರಟೆಹೊಡೆಯುವ ಅವಕಾಶ ಇಂದ್ರ ವರ್ಮನಿಗೆ ಲಭಿಸಿತು. ಬಾಲಾಮಣಿ ಸಹ ಅವನಕೂಡ ಅತಿ ಸಲುಗೆಯಿಂದಲೇ ಇದ್ದಳು.

ಆಕೆ ಯಾವ ಕೆಲಸ ಮಾಡುತ್ತಿದ್ದರೂ ಇಂದ್ರವರ್ಮನು ಆಕೆಯ ಹಿಂದೆ ಹಿಂದೆ ತಿರುಗಿಕೊಂಡು ಏನೇನೋ ಹೇಳುವನು.

ಸಂಜೆ ಉದ್ಯಾನವನದಲ್ಲಿ ಇಬ್ಬರೂ ಬಹಳ ಹೊತ್ತು ಸುತ್ತಾಡಿದರು. ಆ ರಾತ್ರಿ ಭೋಜನ ಮುಗಿಸಿ ಮನೆಯಮುಂದಿದ್ದ ಚಪ್ಪರದ ಕೆಳಗೆ ಬೆಳದಿಂಗಳಲ್ಲಿ ಕುಳಿತು ಆ ಮಾತು ಈ ಮಾತು ಆಡುತ್ತಾ ಕಾಲಕಳೆದರು. ನಡು ರಾತ್ರಿಯ ನಂತರ ಅವರು ತಮ್ಮ ತಮ್ಮ ಕೋಣೆಗಳಿಗೆ ಮಲಗಲು ಹೋದರು.

'ನಾನು ನಿನ್ನನ್ನು ಪ್ರೇಮಿಸುವೆನು. ನನ್ನನ್ನು ಮದುವೆಯಾಗುವೆಯಾ?' ಎಂದು ಬಾಲಾಮಣಿಯನ್ನು ಕೇಳಲು ಇಂದ್ರವರ್ಮನಿಗೆ ಇದಕ್ಕಿಂತಲೂ ಉತ್ತಮ ಅವಕಾಶ ಮತ್ತೆ ಸಿಗುವಂತಿರಲಿಲ್ಲ. ಆದರೂ ಅವನು ಆ ಪ್ರಸ್ತಾಪವೆತ್ತಲಿಲ್ಲ. ಒಂದುವೇಳೆ ಬಾಲಾಮಣಿ 'ನನಗೆ ನಿನ್ನಲ್ಲಿ ಪ್ರೇಮವಿಲ್ಲ' ಎಂದು ಹೇಳಿಬಿಟ್ಟರೆ, ತಾನು ಆ ಮನೆಯಿಂದ ಹೊರಟುಬಿಡಬೇಕಾದೀತು. ಓಡಿಹೋಗಿ ಹಾಲು ಕುಡಿಯುವುದಕ್ಕಿಂತಲೂ ಇರುವಲ್ಲೇ ಉಳಿದು ನೀರು ಕುಡಿಯುವುದು ಲೇಸು.

ಇನ್ನೆರಡು ದಿನಗಳಲ್ಲಿ ವಿಜಯಸಿದ್ಧಿ ಮನೆಗೆ ಹಿಂತಿರುಗುವನು. ಅದುವರೆಗೆ ಆಕೆಯೊಂದಿಗೆ ಆನಂದದಿಂದ ಓಡಾಡಿಕೊಂಡಿರಬಹುದು. ಪ್ರೇಮದ ಮಾತೆತ್ತಿ ವೃಥಾ ಏಕೆ ಈ ಅಲ್ಪ ಆನಂದವನ್ನೂ ಹಾಳು ಮಾಡಿಕೊಳ್ಳಬೇಕು ಎಂದುಕೊಂಡ ಇಂದ್ರವರ್ಮ. ಅವನು ತನ್ನ ಕೋಣೆಗೆ ಬಂದು ಬಾಗಿಲು



ಹಾಕಿ, ಹಾಸಿಗೆಯ ಮೇಲೆ ಕುಳಿತಕೂಡಲೇ ವಿಜಯಸಿದ್ಧಿ ಕೋಣೆಯನ್ನು ಪ್ರವೇಶಿಸು ತ್ತಿರುವುದು ಸ್ಪಷ್ಟವಾಗಿ ಕಾಣಿಸಿತು! ಇಂದ್ರ ವರ್ಮನು ಬೆಚ್ಚಿಬಿದ್ದ. ವಿಜಯಸಿದ್ಧಿ ಆಗಲೇ ಮನೆಗೆ ಬಂದುಬಿಟ್ಟನೇನು! ಅಗಳಿಹಾಕಿದ ಬಾಗಿಲಿನಲ್ಲಿ ಇವನು ಹೇಗೆ ಒಳಗೆ ಬಂದ? ಬಹುಶಃ ವಿಜಯಸಿದ್ಧಿ ಹೇಗೋ ಸತ್ತು ದೆವ್ವ ವಾಗಿರಬಹುದೆಂದುಕೊಂಡ ಇಂದ್ರವರ್ಮ.

ಇಷ್ಟರಲ್ಲಿ ಆ ಆಕಾರ ನೆಟ್ಟಗೆ ಬಂದು ಒಂದು ಕುರ್ಚಿಯಲ್ಲಿ ಕುಳಿತು ಇಂದ್ರವರ್ಮ ನೊಂದಿಗೆ ಇಂತೆಂದಿತು: "ನನ್ನನ್ನು ಕಂಡು ಅಚ್ಚರಿಪಡಬೇಡ. ನಾನು ವಿಜಯಸಿದ್ಧಿಯ ದೆವ್ವ. ನಿನ್ನೊಂದಿಗೆ ಕೆಲವಾರು ವಿಷಯ ಗಳನ್ನು ಮಾತನಾಡಲು ಬಂದಿದ್ದೇನೆ. ವಿಜಯ ಸಿದ್ಧಿ ಊರಿನಲ್ಲೇ ಇದ್ದನಾದುದರಿಂದ ನನಗೆ ಇಷ್ಟು ದಿನ ಬರಲು ಸಾಧ್ಯವಾಗಲಿಲ್ಲ.''

"ಬದುಕಿರುವಾತ ದೆವ್ವವಾಗುವುದೆಂದ ರೇನು?'' ಎಂದ ಇಂದ್ರವರ್ಮ ಬೆರಗಾಗಿ.

"ಅದೇ ಹೇಳಲು ಬಂದೆ. ಒಂದು ಅಚಾ ತುರ್ಯವಾಯಿತು. ನೋಡು, ಎರಡು ವರ್ಷ ಗಳ ಕೆಳಗೆ ವಿಜಯಸಿದ್ಧಿ ಹಾಸಿಗೆ ಹಿಡಿದ. ಬದುಕುವ ಆಶೆಯಿರಲಿಲ್ಲ. ಇನ್ನೇನು ಸತ್ತೇ ಹೋಗುವನೆಂದಿದ್ದಾಗ ನಾನು ಆತನ ದೆವ್ವ ವಾಗಿ ಕೆಲಸಮಾಡಲು ಒಪ್ಪಿಕೊಂಡು ಆತನ ಶರೀರದಂತಹ ದೇಹವನ್ನೂ ಮಾಡಿಸಿಕೊಂಡೆ. ಆದರೆ ಅಕಸ್ಮಾತ್ ಮುದುಕ ಚೇತರಿಸಿ ಕೊಂಡುಬಿಟ್ಟ. ನನಗೆ ತ್ರಿಶಂಕುಸ್ವರ್ಗ ವಾಯಿತು! ನನಗೆ ನೀನೊಂದು ಸಹಾಯ






ಮಾಡಬೇಕು. ಯಾರಾದರೂ ಸಾಯಲಿರುವ ಸಂಗತಿ ನಿನಗೆ ತಿಳಿದಕೂಡಲೇ ನನಗೊಂದು ಮಾತು ಹೇಳು. ನಾನು ಅವರ ದೆವ್ವವಾಗಿ ಕೆಲಸವನ್ನು ಪಡೆದುಕೊಳ್ಳುತ್ತೇನೆ. ಈ ಈ ವಿಜಯಸಿದ್ಧಿ ಈಗಲೇ ಸಾಯುವಂತೆ ತೋರದು. ನಿನ್ನೊಂದಿಗೆ ಮಾತನಾಡಲು ಇದುವರೆಗೆ ನನಗೆ ಅವಕಾಶವಾಗಲಿಲ್ಲ. ವಿಜಯಸಿದ್ಧಿ ಪಕ್ಕದ ಕೋಣೆಯಲ್ಲೇ ಮಲಗಿ ಕೊಳ್ಳುತ್ತಾನೆ. ನಾನು ನಿನ್ನೊಂದಿಗೆ ಹೇಳುವ ಮಾತುಗಳು ಅವನಿಗೆ ಕೇಳಿಸದಿದ್ದರೂ, ನೀನು ಕೊಡುವ ಉತ್ತರ ಕೇಳಿಸುವುದಷ್ಟೇ? ಆತ ನೆಂದರೆ ನನಗೆ ಸಿಂಹ ಭಯ. ಆತನಿಗೆ ಹೆದರಿ ನಾನು ಈ ಆವರಣದಲ್ಲೇ ಸುಳಿಯುತ್ತಿರಲಿಲ್ಲ. ನನಗೆ ನೀನು ಸಹಾಯನೀಡಿದರೆ, ನಿನ್ನ ಪ್ರೇಮವು ಜಯಿಸುವಂತೆ ನಾನು ನೋಡಿ ಕೊಳ್ಳುತ್ತೇನೆ" ಎಂದಿತು ದೆವ್ವ.

ತನ್ನ ಪ್ರೇಮದ ವಿಷಯ ಭೂತವೂ ಅರಿತಿರುವುದನ್ನು ತಿಳಿದು ಇಂದ್ರವರ್ಮನಿಗೆ ಬಹಳ ನಾಚಿಕೆ ಆಯಿತು. ಅವನು ದೆವ್ವದೊಂದಿಗೆ "ದಿನಾ ಸಾವಿರಾರು ಜನ ಸಾಯುತ್ತಿದ್ದಾರೆ! ನಿನಗೊಂದು ಕೆಲಸ ದೊರೆಯಲಿಲ್ಲವೇ?" ಎಂದ.

"ಈ ದೆವ್ವದ ಉದ್ಯೋಗಕ್ಕೆ ಎಷ್ಟೊಂದು ಪೈಪೋಟಿ, ಎಷ್ಟೊಂದು ಹುರುಡು! ಒತ್ತಿಯಗಳೆಷ್ಟು, ಶಿಪಾರಸುಗಳೆಷ್ಟು! ಸ್ವತಃ ಹೋಗಿ ಉದ್ಯೋಗ ಹುಡುಕೋಣವೆಂದರೆ ನಾನು ಈ ಸಂಧಿಗ್ಧದಲ್ಲಿ ಸಿಲುಕಿಕೊಂಡು ಬಿಟ್ಟಿದ್ದೇನೆ. ಇಂತಹ ಸ್ಥಳದಲ್ಲಿ ಕೆಲಸ ಖಾಲಿ ಇದೆ ಎಂದು ತಿಳಿದರೆ, ನನಗೆ ಸಹಾಯಮಾಡಬಲ್ಲ ಮಿತ್ರರಿದ್ದಾರೆ. ನಿನಗೆ ಅರಮನೆಯ ವಿಷಯಗಳು ತಿಳಿಯುವ ಅವಕಾಶವಿದೆ. ಹತ್ಯೆಗಳಾಗಲೀ, ಆತ್ಮಹತ್ಯೆಗಳಾಗಲೀ ಇದ್ದರೆ ನನಗೆ ತಿಳಿಸು. ನಿನ್ನ ಉಪಕಾರವನ್ನು ಮರೆಯುವುದಿಲ್ಲ. ಬಾಲಾಮಣಿಯನ್ನು ಪಡೆಯಲು ನಿನಗೆ ಸಹಾಯಮಾಡುತ್ತೇನೆ" ಎಂದು ದೆವ್ವ ಅದೃಶ್ಯವಾಯಿತು.

ಮಾರನೇಯದಿನವೂ ಇಂದ್ರವರ್ಮನು ಬಾಲಾಮಣಿಯೊಂದಿಗೆ ಸಲುಗೆಯಿಂದ ಮಾತನಾಡಿದನು. ಸಂಜೆ ಇಬ್ಬರೂ ಉದ್ಯಾನದಲ್ಲಿ ಓಡಾಡಿದರು. ರಾತ್ರಿ ಬೆಳದಿಂಗಳಲ್ಲಿ ಲತಾಗೃಹದಲ್ಲಿ ಕುಳಿತು ಕಾಲಕಳೆದರು. ಆದರೂ

ಇಂದ್ರವರ್ಮನು ತನ್ನ ಪ್ರೇಮದ ವಿಷಯ ವನ್ನು ಅವಳೊಂದಿಗೆ ಪ್ರಸ್ತಾಪಿಸಲಿಲ್ಲ.

ಅಕಸ್ಮಾತ್ತಾಗಿ ಇಂದ್ರವರ್ಮನಿಗೆ ಬಾಲಾಮಣಿಯ ಹಿಂದೆ ದೆವ್ವ ಕಾಣಿಸಿಕೊಂಡಿತು. "ನೀನೊಬ್ಬ ಹುಚ್ಚ. ಮದುವೆಯಾಗುವಂತೆ ಬಾಲಾಮಣಿಯನ್ನು ಕೇಳಬಾರದೆ? ನೀನೆಂದು ಅದರ ಪ್ರಸ್ತಾಪಮಾಡುವಿಯೋ ಎಂದು ಅವಳು ಕಾತುರದಿಂದ ನಿರೀಕ್ಷಿಸುತ್ತಿರುವಳು. ರಕ್ಕಸನಂತಿರುವ ವಿಜಯಸಿದ್ಧಿ ಈಗ ಮನೆಗೆ ಹಿಂತಿರುಗಿದರೆ, ಮತ್ತೆರಡು ವರ್ಷ ಮನೆಬಿಟ್ಟು ಎಲ್ಲಿಗೂ ಹೋಗುವುದಿಲ್ಲ! ಆತನು ಇಲ್ಲಿರುವಾಗ ನಿನಗೆ ಈ ವಿಷಯ ಪ್ರಸ್ತಾಪಿಸಲು ಇಷ್ಟು ಒಳ್ಳೆಯ ಅವಕಾಶವಿರಲಾರದು" ಎಂದಿತು ದೆವ್ವ.

"ನನಗೆ ಆತನ ಸುದ್ದಿ ಹೇಳಬೇಡ" ಎಂದ ಇಂದ್ರವರ್ಮ ಹುಬ್ಬುಗಂಟಿಕ್ಕಿ ಬೇಸರದಿಂದ ದೆವ್ವದೊಂದಿಗೆ.

"ಯಾರ ಸುದ್ದಿ, ಏನು ವಿಷಯ?" ಎಂದು ಕೇಳಿದಳು ಬಾಲಾಮಣಿ ಆಶ್ಚರ್ಯದಿಂದ. ಆಕೆಗೆ ದೆವ್ವವಾಡಿದ ಮಾತುಗಳು ಕೇಳಿಸದಿದ್ದರೂ ಇಂದ್ರವರ್ಮನು ಹೇಳಿದ ಉತ್ತರ ಮಾತ್ರ ಕೇಳಿಸಿತು. ಫಕ್ಕನೆ ಇಂದ್ರವರ್ಮನಿಗೆ ದಿಕ್ಕುತೋರದೆ ಬಾಯಿಗೆ ಬಂದುದನ್ನು ಹೇಳಿಬಿಟ್ಟ: "ಆ ಭೂಪತಿ ಇದ್ದಾನಲ್ಲಾ, ಅವನ ವಿಷಯ."

"ಛೆ, ಅವರನ್ನು ಕುರಿತು ಹಾಗೆ ಮಾತನಾಡುವುದು ಧರ್ಮವಲ್ಲ. ಆತ ತುಂಬಾ



ಮೇಧಾವಿ, ದೊಡ್ಡ ತರಹೆ ಮನುಷ್ಯರು. ಶೀಘ್ರದಲ್ಲೇ ಅವರಿಗೆ ಭಾರಿ ಉದ್ಯೋಗ ಸಿಗುವುದೆಂದು ಜನರು ಹೇಳಿಕೊಳ್ಳುತ್ತಿದ್ದಾರೆ. ಅವರು ಅರಸರ ಸಲಹೆಗಾರರಾಗಲು ಅರ್ಹತೆ ಪಡೆದಿದ್ದಾರೆ!" ಎಂದಳು ಬಾಲಾಮಣಿ.

"ಅದೆಲ್ಲಾ ನಿಜವಿರಬಹುದು. ಆದರೆ ನನಗೇಕೋ ಆತನೆಂದರೆ ಸರಿ ಬೀಳುವುದಿಲ್ಲ." ಎಂದ ಇಂದ್ರವರ್ಮ.

"ನೀನು ಮತ್ತೆ ನನ್ನೊಂದಿಗೆ ಮಾತನಾಡಿದರೆ ಇಕ್ಕಟ್ಟಿಗೆ ಸಿಲುಕಿ ಕೊಳ್ಳುವುದು ಖಂಡಿತ. ತುಂಬಾ ಜಾಗ್ರತೆಯಿಂದಿರಬೇಕು. ನಾನು ಹೇಳಿದ ವಿಷಯವೇನಾಯಿತು? ಅದರಬಗ್ಗೆ ಸುದ್ದಿ ಹೇಳುವುದೇನಾದರೂ ಇದೆಯೇ? ಈಗ ಹೇಳಬೇಡ. ನಿನ್ನ ಮಲಗುವ ಕೋಣೆಗೆ

ಬರಲೋ, ಇಲ್ಲ ಈಕೆ ಹೋಗುವತನಕ ಇಲ್ಲೇ ಎಲ್ಲಾದರೂ ಓಡಾಡಿಕೊಂಡಿರಲೇ?'' ಎಂದು ಇಂದ್ರವರ್ಮನನ್ನು ಕೇಳಿತು ದೆವ್ವ.

ಇಂದ್ರವರ್ಮನು ತಾಳ್ಮೆಗೆಟ್ಟು "ನೀನು ಮೊದಲು ಇಲ್ಲಿಂದ ಹೊರಡು. ನಿನ್ನೊಂದಿಗೆ ಮಾತನಾಡಲು ನನಗೆ ಪುರಸೊತ್ತಿಲ್ಲ'' ಎಂದು ಸಿಟ್ಟಿನಿಂದ ಗದರಿಕೊಂಡ.

ಬಾಲಾಮಣಿ ಅವನಕಡೆ ದಿಗ್ಭ್ರಮೆಯಿಂದ ನೋಡಿದಳು. ಆಕೆಯ ಮುಖ ಕೆಂಪೇರಿತು. "ಸದ್ಯ, ಈ ವಿಷಯ ಈಗಲಾದರೂ ಹೇಳಿದಿರಲ್ಲಾ, ತುಂಬಾ ಉಪಕಾರವಾಯಿತು'' ಎಂದು ಆಕೆ ಸರಕ್ಕನೆ ಎದ್ದು ನಿಂತಳು.

"ಬಾಲಾ, ಅದಲ್ಲ ಸಂಗತಿ. ಒಂದುಕ್ಷಣ ನಿಲ್ಲು. ನನ್ನ ಉದ್ದೇಶವೇನೆಂದರೆ....'' ಎಂದು ಇಂದ್ರವರ್ಮನು ಮತ್ತೇನೋ ಹೇಳುತ್ತಿರುವಲ್ಲಿ, ಆಕೆ ತಿರುಗಿ ಸಹ ನೋಡದೆ ಸರಸರನೆ ಒಳಕ್ಕೆ ನಡೆದುಬಿಟ್ಟಳು.

ಇಂದ್ರವರ್ಮನು ಖಿನ್ನನಾದನು. "ಎಲೆ, ಪಾಪಿ ಭೂತವೇ, ನನ್ನ ಬಾಳೆಲ್ಲಾ ಬರಡು ಮಾಡಿದೆ. ಸರ್ವನಾಶವಾಯಿತು. ನಿನ್ನ ಸಹಾಯಕ್ಕಿಷ್ಟು ಬೆಂಕಿ ಹಾಕಿದರು'' ಎಂದು ದೆವ್ವವನ್ನು ನಿಂದಿಸಿದನು.

"ಆಗಾಗ ಇಂತಹ ಅಚಾತುರ್ಯಗಳು ನಡೆಯುವುದು ಸಹಜ. ಯುಕ್ತಿಯಿಂದ ಪಾರಾಗಬೇಕು. ಬೇಸರದಿಂದ ಧೈರ್ಯಗೆಡಬೇಡ, ನಾನಿದ್ದೇನೆ'' ಎಂದು ಹೇಳಿ ದೆವ್ವ ಅದೃಶ್ಯವಾಯಿತು. ಇಂದ್ರವರ್ಮ ಆ ರಾತ್ರಿ ನಿದ್ರೆಹೋಗಲಿಲ್ಲ.



"ನಾನು ನಿನ್ನ ತಂದೆಯ ದೆವ್ವದೊಂದಿಗೆ ಮಾತನಾಡಿದೆ, ನಿನ್ನೊಂದಿಗೆ ಅಲ್ಲ" ಎಂದು ಹೇಳಿದರೆ ಬಾಲಾಮಣಿ ನಂಬುವುದಿಲ್ಲ. ಒಂದು ವೇಳೆ ನಂಬಿದರೆ ತಮ್ಮ ಮನೆಯಲ್ಲಿ ದೆವ್ವ ಸುಳಿದಾಡಿಕೊಂಡಿದೆ ಯೆಂದು ಹೆದರುತ್ತಾಳೆ. ತನ್ನ ತಂದೆ ಸತ್ತೂ ಭೂತವಾಗಿರುವನೆಂದು ಭಾವಿಸಿ ಅವಳ ಎದೆಯೊಡೆಯುವುದು. ವಾಸ್ತವಾಂಶವನ್ನು ಹೇಳದಿದ್ದರೆ ಮತ್ತೆಂದೂ ತನ್ನೊಂದಿಗೆ ಆಕೆ ಮಾತನಾಡುವುದಿಲ್ಲ. ಎಂತಹ ಪೇಚಾಟಬಂತು!

ಅವನು ಊಹಿಸಿದಂತೆಯೇ ಆಯಿತು. ಮಾರನೇಯದಿನ ಆಕೆ ತೀರಾ ಉದಾಸೀನ ಭಾವತಾಳಿದ್ದಳು. ಅವನು ಮಾತನಾಡಲೂ ಸಹ ಆಕೆ ಅವಕಾಶಕೊಡಲಿಲ್ಲ. ಆ ರಾತ್ರಿ ಆಕೆ ಲತಾಗೃಹದಲ್ಲಿ ಕುಳಿತುಕೊಂಡಿರುವಾಗ ಇಂದ್ರವರ್ಮನು ಆಕೆಯನ್ನು ಸಮೀಪಿಸಿ "ಬಾಲಾ, ನನ್ನನ್ನು ಅಪಾರ್ಥಮಾಡಿಕೊಳ್ಳಬೇಡ. ನನ್ನಮೇಲೆ ನಿಷ್ಕಾರಣವಾಗಿ ಕುಪಿತಳಾಗಿರುವೆ" ಎಂದನು.

"ನಿನ್ನೆ ನೀವು ಹೇಳಿದ ಮಾತು ಬಹಳ ಕಠಿನವಾಗಿರಲಿಲ್ಲವೇ?" ಎಂದು ಕೇಳಿದಳು ಬಾಲಾಮಣಿ.

"ನಾನು ನಿನ್ನೊಂದಿಗೆ ಹಾಗೆ ಮಾತನಾಡಬಲ್ಲೆನೇ? ನನ್ನ ಹೃದಯಬಿಚ್ಚಿ ಹೇಳಿದರೆ ನೀನು ಎಂದಿಗೂ ಹಾಗೆ ತಿಳಿಯಲಾರೆ. ಈಗೊಂದು ಅವಾಂತರವಿರುವುದರಿಂದ ನಾನು ಮನಬಿಚ್ಚಿ ಮಾತನಾಡಲಾರೆ" ಎಂದ ಇಂದ್ರವರ್ಮ ಅವಳಬಳಿ ಕುಳಿತುಕೊಂಡು.



ಬಾಲಾಮಣಿ ಅವನಕಡೆ ನೋಡಿ "ಯಾರು ಅವಾಂತರ ನನ್ನ ತಂದೆಯೇ!" ಎಂದು ಕೇಳಿದಳು. ಆಕೆಯ ಮುಖವನ್ನು ನೋಡಿದರೆ ತನ್ನನ್ನು ಪ್ರೇಮಿಸುತ್ತಿರುವಂತೆ ಇಂದ್ರವರ್ಮ ನಿಗೆ ತೋರಿತು. ಅವನಿಗೆ ಈಗ ಸ್ವಲ್ಪ ಧೈರ್ಯ ಬಂತು. ತನ್ನ ಪ್ರೇಮದ ವಿಷಯವನ್ನು ಆಕೆ ಯೊಂದಿಗೆ ಹೇಳುವ ಉದ್ದೇಶದಿಂದ ಅವನು ಬಾಲಾಮಣಿಯ ಹತ್ತಿರ ಸರಿದು ಕುಳಿತು ಕೊಳ್ಳುತ್ತಿರಲು, ದೆವ್ವ ಮತ್ತೆ ಕಾಣಿಸಿಕೊಂಡು "ಅಸಲು ವಿಷಯ ಹೇಳಿದೆಯಾ? ವಿಜಯ ಸಿದ್ಧಿ ಹಿಂತಿರುಗಿ ಬರುತ್ತಿದ್ದಾನೆ. ಇನ್ನೊಂದು ಗಳಿಗೆಯಲ್ಲಿ ಮನೆ ಸೇರುವನು. ಮತ್ತೊಂದು ಶುಭ ಸಮಾಚಾರ. ನನಗೆ ಈಗ ವರ್ಗ ವಾಯಿತು. ದೂರದೇಶವೊಂದರಲ್ಲಿ ಪ್ರಜೆ ಗಳು ದಂಗೆಯೆದ್ದು ತಮ್ಮ ಅರಸನನ್ನು ಕೊಲೆ ಮಾಡಿದರು. ನನ್ನ ಮಿತ್ರರು ಕೆಲವರು ನನ್ನ ಪರವಾಗಿ ಕಲಸಮಾಡಿ ನನಗೆ ಆ ರಾಜನ ಭೂತದ ಕೆಲಸ ಸಿಗುವಂತೆ ಸಹಾಯ ಮಾಡಿದ್ದಾರೆ. ನಾನು ಬೇಗಹೋಗಬೇಕು. ನಮಸ್ಕಾರ" ಎಂದು ಮಾಯವಾಯಿತು.

ಇಂದ್ರವರ್ಮನು ಬಾಲಾಮಣಿಯಕಡೆ ನೋಡಿ, ಆಕೆಯ ಕರಗಳನ್ನು ತನ್ನ ಕೈಯಲ್ಲಿ ಹಿಡಿದು ಮೆಲುದನಿಯಿಂದ "ಬಾಲಾ, ನನ್ನನ್ನು ಮದುವೆಯಾಗುವೆಯಾ? ಈ ಪ್ರಪಂಚದಲ್ಲಿ ನನಗೆ ನಿನಗಿಂತಲೂ ಪ್ರಿಯ ರಾದವರು ಯಾರೂ ಇಲ್ಲ" ಎಂದ.

"ನನಗೂ ನಿಮಗಿಂತಲೂ ಆಪ್ತರಿಲ್ಲ. ನಮ್ಮಿಬ್ಬರಿಗೆ ಮದುವೆ ಮಾಡುವಂತೆ ಅಪ್ಪ ನೊಂದಿಗೆ ಹೇಳುತ್ತೇನೆ. ಅವರು ಖಂಡಿತ ಒಪ್ಪಿಕೊಳ್ಳುತ್ತಾರೆ" ಎಂದಳು ಬಾಲಾಮಣಿ.

ಎಲ್ಲಾ ಅವರ ಹಂಚಿಕೆಯಂತೆಯೇ ನಡೆ ಯಿತು. ಇಂದ್ರವರ್ಮನು ತನ್ನ ಮಗಳನ್ನು ವಿವಾಹವಾಗಲು ವಿಜಯಸಿದ್ಧಿ ಸಮ್ಮತಿಸಿ ದನು. ಆದರೆ ಆತನದೊಂದು ಷರತುಮಾತ್ರ ವಿತ್ತು. ಅಳಿಯ ತನ್ನ ಮನೆಯಲ್ಲೆ ಇರ ಬೇಕೆಂದು ಆತನು ಕೋರಿದನು.

ಇಂದ್ರವರ್ಮ, ಬಾಲಾಮಣಿಯರಿಗೆ ವಿಜೃಂಭಣೆಯಿಂದ ವಿವಾಹನಡೆಯಿತು. ಇಂದ್ರ ವರ್ಮನಿಗೆ ಅಂದೇ ರಾಜಾಸ್ಥಾನದಲ್ಲಿ ನೌಕ ರಿಯೂ ಲಭಿಸಿತು.





# ಪ್ರಕೃತಿಯ ಸೋಜಿಗಗಳು

## 2

"ನನ್ನ ಹೆಸರು ಕುಮೇವಾವಾ. ನಮ್ಮದು ಕರಾಜಾ ಜಾತಿ. ಪರಿಚಿತರು ನನ್ನನ್ನು ವಾವಾ ಎಂದು ಕರೆಯುತ್ತಾರೆ. ಟರ್ಕೀ ಕೋಳಿ ತಿನ್ನಲು ಚೆನ್ನಾಗಿರುತ್ತೆ. ನಾನು ಪಕ್ವ ಮಾಡಿ ಕೊಡುತ್ತೇನೆ. ದೂರದಲ್ಲಿ ನಾನು ಮೀನು ಹಿಡಿಯುವಾಗ ಬಾಯಾರಿಕೆಯಾಗಿ, ಸ್ವಲ್ಪ ನೀರು ಕುಡಿದೆ, ಉಪ್ಪಾಗಿರುವುದು ಕಂಡಿತು. ಎಲ್ಲಿಯೋ ಹಡಗು ಮುಳುಗಿ ನೀರಿನಲ್ಲಿ ಉಪ್ಪು ಬೆರೆತಿರಬೇಕೆಂದು ತಿಳಿದೆ. ಜನರು ಆಪತ್ತಿನಲ್ಲಿರುವರೇನೋ ಎಂದುಕೊಂಡು ಬೇಗನೇ ಬಂದೆ." ಎಂದ ಆ ಹುಡುಗ. "ನೀರು ಉಪ್ಪಾಗಿದ್ದಮಾತ್ರಕ್ಕೇ ಮನುಷ್ಯರು ಆಪತ್ತಿನಲ್ಲಿರುವರೆಂದು ತಿಳಿದೆಯಾ?" ಎಂದು ಕೇಳಿದೆ.

"ಎಲ್ಲಾ ನಮ್ಮ ತಾತನ ಮಾತು. ನೊಣಗಳಿರುವಲ್ಲಿ ಜೇನೂ ಇರುವುದೆಂದು ಮಲೋವಾ ತಾತ ಹೇಳುತ್ತಾನೆ" ಅಂದ ಹುಡುಗ. "ನಿಮ್ಮ ಜಾತಿಗೆ ಬಿಳಿಜನರೆಂದರೆ ಇಷ್ಟವಿಲ್ಲವಷ್ಟೆ? ಮತ್ತೇಕೆ ಬಂದೆ?" ಎಂದು ಕೇಳಿದೆ. "ಕಷ್ಟದಲ್ಲಿರುವವರಿಗೆ ಸಹಾಯಮಾಡುವುದೆಂದರೆ, ತನಗೆ ತಾನೇ ಸಹಾಯಮಾಡಿಕೊಳ್ಳುವುದೇ ಎಂದು ಮಲೋವಾ ತಾತ ಹೇಳುತ್ತಾನೆ" ಎಂದನವ.

"ಚೆನ್ನಾಗಿದೆ. ಆದರೆ ನೀನು ನಮಗೆ ಹೇಗೆ ಸಹಾಯಮಾಡುತ್ತಿ? ನಿನಗೆ ಹತ್ತು ವಯಸ್ಸು ಕೂಡಾ ಆದಹಾಗಿಲ್ಲವಲ್ಲ?" ಎಂದೆ.

"ನನಗೆ ಹನ್ನೆರಡು ವರ್ಷ. 'ಮೀನಿಗೆ ನೀಳ ಮುಖ್ಯ, ಮನುಷ್ಯನಿಗೆ ಬುದ್ಧಿ ಮುಖ್ಯ' ಅನ್ನುತ್ತಾನೆ ನಮ್ಮ ಮಲೋವಾ ತಾತ."

ಹೀಗೆ ಮಾತಾಡುತ್ತಾ ಅವನು ಎರಡು ಗಿಡಗಳ ಕೋಲುಗಳನ್ನು ಕಡಿದು ತಂದು ಬೆಂಕಿಯ ಇಕ್ಕಡೆಗಳಲ್ಲೂ ಹುಗಿದ. ಬಳಿಕ ಕೋಳಿಯ ಗರಿಗಳನ್ನು ತೆಗೆದು ಅದನ್ನು ಆ ಕೋಲುಗಳಮೇಲೆ ಸುಡಲಿಕ್ಕಿಟ್ಟ.

ಆ ಹುಡುಗನಿಗೆ ಅಷ್ಟುಮಂದಿಯಲ್ಲಿ ನಾನೊಬ್ಬ ಹೇಗೆ ಸಿಕ್ಕಿದೆನೋ ಏನೋ.

ತಿಬೋರ್ ಸೆಕೆಲ್ಯ್



ಮರುದಿನ ಮುಂಜಾನೆ ಆತ ನನ್ನನ್ನು ಎಬ್ಬಿಸಿ, "ಸ್ನಿಕುಚಾಪ್, ಮೀನುಗಳನ್ನು ಹಿಡಿಯಲು ಕುಮೇವಾವಾನೊಂದಿಗೆ ಬರುತ್ತೀರಾ?" ಎಂದು ಕೇಳಿದ.

"ಸ್ನಿಕುಚಾಪ್" ಎಂದರೆ ಅವನ ಭಾಷೆಯಲ್ಲಿ "ಗಡ್ಡದವ" ಎಂದರ್ಥ. ಆಗ ನನಗೆ ದೊಡ್ಡ ಗಡ್ಡವಿತ್ತು. ಇಂಡಿಯನ್ನುಗಳಿಗೆ ಗಡ್ಡ ಮೊಳೆಯುವುದಿಲ್ಲ. ಅಂತೆಯೇ ಇಂಡಿಯನ್ ಜಾತಿಯವರೆಲ್ಲಾ ನನ್ನನ್ನು ಗಡ್ಡದವನೆಂದೇ ಕರೆಯುವರು.

ಈ ಹುಡುಗನನ್ನು ಕಂಡಾಗಿನಿಂದಲೇ ನನಗೆ ಅವನಮೇಲೊಂದು ಪ್ರತ್ಯೇಕ ವಾಂಛೆಯುಂಟಾಗಿತ್ತು. ಆದುದರಿಂದ ನಾನು ಅವನೊಂದಿಗೆ ಹೋಗಲು ಒಪ್ಪಿದೆ. ಅವನ ತೆಪ್ಪ ಆಗಲೇ ಪ್ರಯಾಣಕ್ಕೆ ಸಿದ್ಧವಾಗಿತ್ತು. ಮೀನು ಹಿಡಿಯುವ ಪರಿಕರಗಳೆಲ್ಲಾ ಅದರಲ್ಲಿದ್ದುವು. ಈ ಪರಿಕರಗಳೆಂದರೆ, ಒಂದು ಬಿಲ್ಲು, ಕೆಲವು ಬಾಣಗಳು, ಒಂದು ಕೊಂಡಿಕೋಲು ಇಷ್ಟೇ ಸೈ. ಕೊಂಡಿಕೋಲನ್ನು ಒಂದು ನೀಳವಾದ ಕೋಲಿನ ತುದಿಗೆ ಕಬ್ಬಿಣದ ಆಣಿಯನ್ನು ಸಿಕ್ಕಿಸಿ ಮಾಡಿದುದಾಗಿತ್ತು. ಅದನ್ನು ತೆಪ್ಪದ ಮುಂದಿನ ಭಾಗದಲ್ಲಿ ಉದ್ದವಾದ ಹಗ್ಗದಿಂದ ಕಟ್ಟಿದ್ದಾರೆ. ಬಹಳ ದೊಡ್ಡ ಮೀನುಗಳನ್ನು ಹಿಡಿಯಲಿಕ್ಕೆ ಈ ಕೊಂಡಿಕೋಲು ಉಪಯೋಗವಾಗುತ್ತದೆ.

ತೆಪ್ಪವನ್ನು ಮರದ ಒಂದೇ ಕಾಂಡದಿಂದ ತಯಾರಿಸಿದ್ದರು. ಹುಡುಗ ತೆಪ್ಪದ ಹಿಂದಿನ ಭಾಗದಲ್ಲಿ ಕುಳಿತುಕೊಂಡು ಚಿಕ್ಕ ಹುಟ್ಟಿನಿಂದ ಉಪಾಯವಾಗಿ ತೆಪ್ಪವನ್ನು ನಡೆಸತೊಡಗಿದ. ಮುಂಜಾವಿನ ಗಾಳಿ ಬಹಳ ಶುಚಿಯಾಗಿತ್ತು. ಅರಾಗ್ವಾ ನದಿಯ ಎರಡು ಬದಿಯಲ್ಲಿಯೂ ದಟ್ಟವಾದ ಕಾಡು. ನಮ್ಮ ತೆಪ್ಪ ನದಿಯ ಎಡಗಡೆಯಲ್ಲಿ ತೀರದಗುಂಟ ಸಾಗುತಿತ್ತು. ನಮಗೆ ಅನೇಕ ಮೃಗಗಳ ಕೂಗು ಕೇಳಿಸುತಿದ್ದುವು.

"ಅಗೋ, ಆ ಗಟ್ಟಿಯಾದ ಕೂಗು ಒಂದು ಜಾತಿ ಕೋತಿಯದು. ಅದಕ್ಕೆ ಬೊಬ್ಬೆಕೋತಿ ಎನ್ನುತ್ತಾರೆ" ಎಂದ ಕುಮೇವಾವಾ. ನಮ್ಮ ತೆಪ್ಪ ಆ ಕಡೆಗೆ ಹೋಯಿತು. ನನ್ನನ್ನು ಹುಟ್ಟುಹಾಕಲು ಸನ್ನೆಮಾಡಿ, ಆತ ತೆಪ್ಪವನ್ನು ಒಂದು ಎತ್ತರವಾದ ಮರದಹತ್ತಿರ

ಬದಿಗೆ ಹತ್ತಿಸಿದ. ಆ ಮರದ ಭಾರೀ ಕೊಂಬೆಗಳು ನದಿಯೊಳಕ್ಕೆ ನೇತಾಡುತ್ತಿದ್ದುವು.

"ಅಗೋ ಕಂಡಿತೆ ?"

ಮರದ ತುಟ್ಟತುದಿಯ ಕೊಂಬೆಯಲ್ಲಿರುವ ಬೊಬ್ಬೆಕೋತಿಯನ್ನು ನೋಡಿದೆ. ಅದರ ಬೊಬ್ಬೆ ಕೇಳಿ ಅದೊಂದು ಸಿಂಹದಷ್ಟಿರಬಹುದೆಂದು ಭಾವಿಸಿದ್ದೆ. ಆದರೆ ಅದು ನಾಮಾನ್ಯ ನಾಯಿಯಷ್ಟೇ ಇತ್ತು! ಅದು ಕೂಗಬೇಕೆಂದಾಗ ಅದರ ಕುತ್ತಿಗೆಯಲ್ಲಿರುವ ತಿತ್ತಿಯ ತುಂಬಾ ಗಾಳಿ ಹೀರಿಕೊಳ್ಳುತ್ತದೆ. ಆ ಗಾಳಿಯನ್ನು ಹೊರಕ್ಕೆ ಬಿಡುವಾಗ ಬರುವ ಭಯಂಕರವಾದ ಶಬ್ದಕ್ಕೆ ಬಹಳ ಪ್ರಾಣಿಗಳು ಹೆದರುತ್ತಿರಬೇಕು.



ನಾವು ಮರದಡಿಯಲ್ಲಿ ಕುಳಿತುಕೊಂಡು ಕೋತಿಯನ್ನು ಲಕ್ಷಿಸುತ್ತಿದ್ದಾಗ, ಎರಡು ವಿಚಿತ್ರ ಪಕ್ಷಿಗಳು ಬಂದು ಆ ಮರದಮೇಲೆರಗಿದುವು. ಇವುಗಳಿಗೆ 'ಟೂಕಾನ್' ಅನ್ನುತ್ತಾರೆ. ಇವುಗಳ ರೆಕ್ಕೆಗಳು ಕಪ್ಪು. ಕುತ್ತಿಗೆಯ ಸುತ್ತಲೂ ಹಳದಿಬಣ್ಣದ ಚಾರೆಯಿದೆ. ಪಕ್ಷಿಗಳಷ್ಟೇ ದೊಡ್ಡದಾದ ಕೊಕ್ಕು. ಆ ಬ್ರಹ್ಮಾಂಡದ ಕೊಕ್ಕೂ ಹಳದಿಬಣ್ಣದ್ದು. ಅವು ಹಾರುವಾಗ ಕೊಕ್ಕುಗಳ ಭಾರದಿಂದ ತಲೆ ಕೆಳಗಾಗಲಾರವೇ ಅನಿಸುತ್ತದೆ. ಆದರೆ ನಿಜಕ್ಕೂ ಅವು ಟೊಳ್ಳು ಕೊಕ್ಕುಗಳು. ಅವುಗಳಲ್ಲಿರುವುದೆಲ್ಲಾ ಬರಿ ಗಾಳಿಮಾತ್ರ.

ಹುಡುಗ ಒಂದು ಪೊದರಿನಕಡೆಗೆ ತೋರಿಸಿದನು. ಅವನು ಏನನ್ನು ನೋಡಲಿಕ್ಕೆ ಹೇಳಿದನೋ ನನಗೆ ಮೊದಲು ಗೊತ್ತಾಗಲಿಲ್ಲ. ಆ ಪೊದೆಗಳ ತುಂಬಾ ಸಣ್ಣ ಸಣ್ಣ ಹಕ್ಕಿಗಳಿರುವುವೆಂದು ಕಡೆಗೆ ತಿಳಿಯಿತು. ಅತ್ಯಂತ ಚಿಕ್ಕ ಹಕ್ಕಿಗಳವು. ಅವುಗಳಲ್ಲಿ ಕೆಲವು ತುಂಬಿಗಳಷ್ಟೇ ಇದ್ದುವು. ಅವುಗಳು ಝುಂಕಾರ ಹಕ್ಕಿಗಳು. ಇವುಗಳಿಗೆ ಅನೇಕ ರಂಗುಗಳಿವೆ. ಒಂದರ ಕೊಕ್ಕು ಅತೀ ಸಪುರವಾಗಿ ತುಂಬಾ ಉದ್ದವಾಗಿತ್ತು. ಅವೆಲ್ಲಾ ತಮ್ಮ ರೆಕ್ಕೆಗಳನ್ನು ಎಷ್ಟು ವೇಗವಾಗಿ ಆಡಿಸುತ್ತಿದ್ದುವೆಂದರೆ ನಾವದನ್ನು ನೋಡಲಿಕ್ಕೇ ಸಾಧ್ಯವಿಲ್ಲ. ಹೀಗೆ ಮಾಡುವುದರಿಂದ ಅವು ಗಾಳಿಯಲ್ಲಿ ಒಂದೇ ಕಡೆಯಲ್ಲಿ ಬಹುಹೊತ್ತು ನಿಂತು ಒಂದರೊಡನೊಂದು ಮಾತಾಡಿಕೊಳ್ಳುತ್ತವೆ, ಅಥವಾ ಯಾವ ಕೊಂಬೆಯಲ್ಲಿ ಎರಗಿಕೊಳ್ಳಬೇಕೆಂಬು

ದನ್ನು ನಿಶ್ಚಯಿಸಿಕೊಳ್ಳುತ್ತವೆ. ಆ ಪೊದೆ ತುಂಬಾ ಇರುವ ಎಷ್ಟೋ ಹಕ್ಕಿಗಳು ಒಂದೇ ಬಾರಿಗೆ ಮಾತಾಡಿಕೊಳ್ಳುತ್ತಿವೆ. ಆ ಗಲಾಟೆಯಲ್ಲಿ ಒಂದರ ಮಾತು ಇನ್ನೊಂದಕ್ಕೆ ಹೇಗೆ ತಾನೇ ತಿಳಿಯುವುದೋ ಏನೊ! ಅಕಸ್ಮಾತ್ತಾಗಿ ಹಕ್ಕಿಗಳ ಶಬ್ದ ನಿಂತುಹೋಯಿತು. ಅರಣ್ಯದೊಳಗಿನ ಇತರ ಪ್ರಾಣಿಗಳ ಶಬ್ದಗಳೂ ನಿಂತುಹೋದುವು. ಒಮ್ಮೆಗೇ ಇಡೀ ಅರಣ್ಯವೇ ನಿಶ್ಶಬ್ದವಾಯಿತು. ಮರದಕೊಂಬೆಯಲ್ಲಿದ್ದೆರಡು ಕೋತಿಗಳು ಮಾತ್ರ ಏನೋ ಗುಸಗುಸ ಅಂದುಕೊಳ್ಳುತ್ತಿದ್ದುವು. "ಪ್ರಾಣಿಗಳು ಅಪಾಯವನ್ನು ಸೂಚಿಸುತ್ತವೆ. ನಾವಿಲ್ಲಿಂದ ಹೋಗಬೇಕು" ಎಂದ ಹುಡುಗ.

ನಾವು ತೆಪ್ಪವನ್ನು ತೀರದಿಂದ ದೂಡಿ, ಹುಟ್ಟುಹಾಕಿ ನದಿಯ ಮಧ್ಯಕ್ಕೆ ಹೋಗಿ ಏನು ನಡೆಯುತ್ತದೆಂದು ನೋಡತೊಡಗಿದೆವು.

ಸ್ವಲ್ಪಹೊತ್ತಿಗೆ ಪೊದೆಗಳ ನಡುವಿನಿಂದ ಒಂದು ದೊಡ್ಡ ಬಲಿಷ್ಠವಾದ "ಜಾಗ್ವಾರ್" ಹುಲಿ ನೆಮ್ಮದಿಯಾಗಿ ಅಡಿಯಿಡುತ್ತಾ ಠೀವಿಯಿಂದ ಬಂತು.

"ಜಾಗ್ವಾರ್ ಅಡವಿಗೆ ಅರಸು" ಎಂದು ಹುಡುಗ ನನ್ನೊಡನೆ ರಹಸ್ಯವಾಗಿ ಹೇಳಿದ. ಜಾಗ್ವಾರ್ ನದಿಯಬದಿಗೆ ಬಂದು ನೀರು ಕುಡಿಯಲು ನಿಂತಿತು. ನಾವು ಉಸಿರು ಬಿಗಿಹಿಡಿದು ಅದನ್ನೇ ನೋಡುತ್ತಿದ್ದೆವು. ಅಡವಿಯ ಪ್ರಾಣಿಗಳೆಲ್ಲಾ ನಮ್ಮಹಾಗೇ ಮಾಡುತಿದ್ದಿರಬೇಕು. ಎಲ್ಲಿಯೂ ಏನೊಂದು ಸಪ್ಪಳವೂ ಇಲ್ಲ. ಅದು ಹಿಂದಿರುಗಿ ಮತ್ತೆ ಪೊದೆಗಳೊಳಗೆ ಹೊಕ್ಕು ಅದೃಶ್ಯವಾದಹೊರತು ಅರಣ್ಯಕ್ಕೆ ಮತ್ತೆ ಚೈತನ್ಯ ಬರಲಿಲ್ಲ. ನಾವು ನದಿಯ ಗುಂಟ ತೆಪ್ಪ ಸಾಗಿಸುತ್ತಾ ಹೋದೆವು.

ಸ್ವಲ್ಪದೂರ ಹೋಗಲು ದೂರದಿಂದ ಮೃದುವಾದ ಝುಂಕಾರವು ಕೇಳಬಂದಿತು. ಬರುಬರುತ್ತ ಆ ಧ್ವನಿ ದೊಡ್ಡದಾಗಿ ಬ್ರಹ್ಮಾಂಡದಂತಹ ಹೋರ್ದನಿಯಾಗಿ ಮಾರ್ಪಟ್ಟಿತು. ಅದೇನೆಂಬಂತೆ ಹುಡುಗನ ಕಡೆಗೆ ನೋಡಿದೆ.

"ಝರಿ! ನದಿಗೆ ಅಭ್ಯಾಸವಿಲ್ಲದವರಿಗೆ ಬಹಳ ಅಪಾಯ!" ಎಂದ ಹುಡುಗ.

[ ಇನ್ನೂ ಇದೆ ]



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ನವಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಸೆಪ್ಟೆಂಬರು 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಅಕ್ಕತಂಗಿಯರು ಅವರಾದರೆ

ಎರಡನೇ ಫೋಟೋ: ಚಿಕ್ಕತಾಯಂದಿರು ಇವರೇ!

ಕಳಿಸಿದವರು: ಬಿ. ನಾಗೇಂದ್ರನಾಥ ಬಾಳಿಗ

C/o ನವಜೀವನ್ ಸ್ಟೋರ್ಸ್, ಬಂಟವಾಳ. ದ. ಕ.

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಚಿ ತ್ರ ಕ ಥೆ





ಒಂದು ದಿನ ಸಾಯಂಕಾಲ ವಾಸು ಮತ್ತು ಗೋಪಿಯರು ತಮ್ಮ ಪಾರಿವಾಳಗಳಿಗೆ ಕಾಳು ಹಾಕುತ್ತಿದ್ದರು. ತುಸುದೂರ 'ಟೈಗರ್' ಆಡಿಕೊಳ್ಳುತ್ತಿತ್ತು. ಅಕಸ್ಮಾತ್ತಾಗಿ ದೊಡ್ಡದೊಂದು ಹದ್ದು ಪಾರಿವಾಳಗಳನ್ನು ಹಾರಿಸಿಕೊಂಡು ಹೋಗಲು ರಿವ್ವನೆ ಕೆಳಗೆ ಬಂತು. ಪಾರಿವಾಳಗಳೆಲ್ಲಾ ಭರ್‍ರನೆ ಮರಗಳೆಡೆಗೆ ಓಡಿ ಅಡಗಿದುವು. 'ಟೈಗರ್' ಗಬಕ್ಕನೆ ಹಾರಿ ಹದ್ದಿನ ಬಾಲ ಕಚ್ಚಿತು. ಹದ್ದು ಟೈಗರಿನ ಬೆನ್ನುಬಿತ್ತು. ಟೈಗರ್ ಆ ಮರದೆಡೆಗೆ ಈ ಮರದೆಡೆಗೆ ಓಡಾಡಿದಾಗ, ಹದ್ದು ತಡಕಾಡಲು, ಮರಗಳಿಗೆ ಢೀಕೊಟ್ಟು ಅದರ ರೆಕ್ಕೆಗಳೂ ಕಾಲೂ ಮುರಿದುವು!






Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor: SRI 'CHAKRAPANI'

ಪುಸ್ತಕಗಳೆಂದರೆ ಆಸೆ ಕೆಲವರಿಗೆ...






ಆದರೆ, ಪ್ರತಿಯೊಬ್ಬರಿಗೂ



Parry's ಪ್ಯಾರೀಸ್

ಮಿಠಾಯಿಗಳಲ್ಲಿ ಆಸೆ

ಏಕೆಂದರೆ, ಅವು ಬಹು ರುಚಿಕರ, ಬಹು ಪರಿಶುಭ್ರ, ಬಹು ಆರೋಗ್ಯ

ತಯಾರಿಕೆ: ಪ್ಯಾರೀಸ್ ಕಫೆಕ್ಷನರಿ ಲಿಮಿಟೆಡ್, ಮದರಾಸು

PRS 319

ಪಂಡಿತ ಡಿ. ಗೋಪಾಲಾಚಾರ್ಲುರವರ

# ಅರುಣಾ

ಗರ್ಭಾಶಯ ಟಾನಿಕ್



Diamond 1898 1958 Jubilee

ಆಯುರ್ವೇದಾಶ್ರಮಂ (ಪ್ರೈವೇಟ್) ಲಿಮಿಟೆಡ್ ಮದ್ರಾಸ್-17

## ಗ್ರಾಮಾಫೋನ್‌ಗಳೂ ರಿಕಾರ್ಡುಗಳೂ

ಪ್ರತಿ ಒಂದು ಕಂಪನಿಯ ರಿಕಾರ್ಡುಗಳೂ, ಗ್ರಾಮಾಫೋನ್ಸ್, ಸ್ಪ್ರಿಂಗ್ಸ್, ಸ್ಪೇರ್ ಪಾರ್ಟ್ಸುಗಳು, ನೀಡಲ್‌ಗಳು ಲಕ್ಷಾಂತರ ಇರುತ್ತೆ. ಕೆಲವು ಕನ್ನಡ ಡ್ರಾಮಾ ಸೆಟ್ಟುಗಳು ಮತ್ತು ಬೆಲೆಗಳು

ಧಕ್ಷಯಜ್ಞ 3 ರಿಕಾರ್ಡುಗಳು ರೂ. 9-00, ಗಿರಿಜಾ ಕಲ್ಯಾಣ 3 ರಿಕಾರ್ಡುಗಳು ರೂ. 9-00, ತಾರಕವಧೆ 3 ರಿಕಾರ್ಡುಗಳು ರೂ. 9-00, ಪ್ರಹ್ಲಾದ 3 ರಿಕಾರ್ಡುಗಳು ರೂ. 9.00, ಸಾವಿತ್ರಿ 3 ರಿಕಾರ್ಡುಗಳು ರೂ. 9-00, ಉಷಾಪರಿಣಯ 3 ರಿಕಾರ್ಡುಗಳು ರೂ. 9-00, ದ್ರೌಪತಿ ಸ್ವಯಂವರ 3 ರಿಕಾರ್ಡುಗಳು ರೂ. 9.00, ಸುಭದ್ರ ಪರಿಣಯ 3 ರಿಕಾರ್ಡುಗಳು ರೂ. 9-00, ಸತ್ಯ ಹರಿಶ್ಚಂದ್ರ 4 ರಿಕಾರ್ಡುಗಳು ರೂ. 12-00, ಶ್ರೀ ಕೃಷ್ಣಲೀಲಾ 4 ರಿಕಾರ್ಡುಗಳು ರೂ. 12-00, ಭಕ್ತ ಕಭೀರ್ 4 ರಿಕಾರ್ಡುಗಳು ರೂ. 12-00, ಸದಾರಮಾ 4 ರಿಕಾರ್ಡುಗಳು ರೂ. 12-00, ಕಿರಾತಾರ್ಜುನೀಯ 4 ರಿಕಾರ್ಡುಗಳು ರೂ. 12.00, ವಿರಾಟಪರ್ವ 5 ರಿಕಾರ್ಡುಗಳು ರೂ. 15-00, ಪೂರ್ತಿ ರಾಮಾಯಣ 9 ರಿಕಾರ್ಡುಗಳು ರೂ. 27-0-0, ಬಸವೇಶ್ವರ ಚರಿತ್ರೆ 7 ರಿಕಾರ್ಡುಗಳು ರೂ. 21-00, ವೀರಬಭ್ರುವಾಹನ 2 ರಿಕಾರ್ಡುಗಳು ರೂ. 6-00, ಸತ್ಯನಾರಾಯಣ ವ್ರತ 2 ರಿಕಾರ್ಡುಗಳು ರೂ. 6.00, ನವಗ್ರಹಸ್ತೋತ್ರ ರೂ. 6-00, ಶ್ರೀನಿವಾಸ ಕಲ್ಯಾಣ 4 ರಿಕಾರ್ಡುಗಳು ರೂ. 12-00, ಕುರುಕ್ಷೇತ್ರ 8 ರಿಕಾರ್ಡುಗಳು (ಮಹಾಭಾರತದಿಂದ) ರೂ. 24-00.

### ನಕಲಿಗಳು, ಪದ್ಯಗಳು, ರಾಷ್ಟ್ರಗೀತೆಗಳು

ಮೇಲೆ ತಿಳಿಸಿರುವ ಸೆಟ್ಟುಗಳ ಪ್ರತಿ 2 ಸೆಟ್ಟುಗಳು ಅಥವಾ ಮೇಲ್ ಪಟ್ಟು ತರಸಿಕೊಂಡರೆ ಫ್ರೀ ಡಿಲಿವರಿ ಇಂಡಿಯಾದಲ್ಲಿ ಯಾವ ವೂರಿಗೆ ಬೇಕಾದರು ಮುಂಗಡ ಪೂರ್ತಿ ಮೊಬಲಗು ಅಥವ ಅಡ್ವಾನ್ಸು ಕಳುಹಿಸಿದರೆ ಕಳುಹಿಸುತ್ತೇವೆ

ಹೆಚ್ಚಿನ ವಿವರಗಳಿಗೆ ಮತ್ತೆ ಏನಾದರು ಬೇಕಾದಲ್ಲಿ 0-12-0 ಸ್ಟಾಂಪುಗಳು ಕಳುಹಿಸಿದರೆ ರಿಪ್ಲೆ ಕೊಡುತ್ತೇವೆ. ಇಲ್ಲವಾದಲ್ಲಿ ಸಾಧ್ಯವಿಲ್ಲ.

**ಸೀತಾ ಫೋನ್ ಕಂಪೆನಿ, ಬೆಂಗಳೂರ್ - 2**

## ನಿಮ್ಮ ಬಟ್ಟೆಗಳಿಗೆ ಅತ್ಯುತ್ತಮ ಸಾಬೂನೇ ಬೇಕು—
## ಅದೆಂದರೆ ತಾತಾರವರ 501 ಸ್ಪೆಷಲ್ ಸಾಬೂನು

ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿ ನಿಮ್ಮ ಬಟ್ಟೆಗಳಿಗೆ ವಿಶೇಷ ರಕ್ಷಣೆಯನ್ನು ಕೊಡಿಂ! ಬಟ್ಟೆಗಳನ್ನು ಶುಭ್ರವಾಗಿ, ಹೊಳೆಯುವಂತೆ ಮಾಡುವ ಈ ಸಾಬೂನಿನಿಂದ ಎಂತಹ ನಾಜೂಕು ಬಟ್ಟೆಗಳನ್ನಾದರೂ ಒಗೆಯಬಹುದು. ಯಾವಾಗಲೂ ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿಂ!




ಹೊಸ ಹಳದಿ ಮತ್ತು ಕೆಂಪು ಬಣ್ಣದ
ಹೊದಿಕೆ ಇರುವುದನ್ನು ನೋಡಿ ಕೊಂಡುಕೊಳ್ಳಿರಿ

ತಾತಾ ಆಯಿಲ್ ಮಿಲ್ಸ್ ಕಂಪೆನಿ ಲಿಮಿಟೆಡ್

**ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್**

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1.

Photo by P. Krishnakumar



ಬಹುಮಾನ
ಪಡೆದ ಶೀರ್ಷಿಕೆ

**ಚಿಕ್ಕತಾಯಂದಿರು ಇವರೇ!**

ಕಳಿಸಿದವರು :
ಬಿ. ನಾಗೇಂದ್ರನಾಥ ಬಾಳಿಗ

CHANDAMAMA (Kannada) SEPTEMBER 1958 Regd. No. M. 5210




ರೂಪಧರನ ಯಾತ್ರೆಗಳು - ೧೪